# ರತ್ನಹಾರ

ಬಿ. ಪುಟ್ಟಸ್ವಾಮಯ್ಯ.

ಪುಸ್ತಕಲೋಕ

ಜರ್ನಲಿಸ್ಟ್ ಕಾಲೋನಿ : : ಬೆಂಗಳೂರು ೨

ಪುಸ್ತಕಲೋಕ—೨

ಪ್ರಥಮ ಮುದ್ರಣ ೧೯೫೪



ಪ್ರಕಾಶಕರು :
**ಕೆ. ಎಸ್. ರಾಮಸ್ವಾಮಿ,**
ಪುಸ್ತಕಲೋಕ, ಜರ್ನಲಿಸ್ಟ್ ಕಾಲೋನಿ, ಬೆಂಗಳೂರು ೨

ಮುದ್ರಕರು :
**ಎಸ್. ನಂಜಪ್ಪ,**
‘ ಉಷಾ ಪ್ರೆಸ್ ’
೮೦೬, ಚಿಕ್ಕಪೇಟೆ — ಬೆಂಗಳೂರು ೨

# ಮೊದಲನೆಯ ಪರಿಚ್ಛೇದ

ಕ್ರಿ. ಶ. ೧೯೪೮ನೆ ಸಂವತ್ಸರದ ಮಾರ್ಚಿ ತಿಂಗಳಲ್ಲೊಂದು ದಿನ ಬೊಂಬಾಯ್ ನಗರದ ಸುಪ್ರಸಿದ್ಧ ಬ್ಯಾರಿಸ್ಟರ್ ರಮಾನಂದ ರಾಯರ ಆಪ್ತ ಕಾರ್ಯದರ್ಶಿ ಪ್ರಮೀಳಾರಾವ್ ಚೌಪತಿಯಲ್ಲಿ ಕಛೇರಿಗೆ ಬಂದ ಕೂಡಲೆ ಗುಮಾಸ್ತ ಆಗ ತಾನೆ ತಲಪಿದ್ದ ತಂತಿ ವಾರ್ತೆಯೊಂದನ್ನು ಕೈಗೆ ಕೊಟ್ಟನು. ಪ್ರಮೀಳಾ ಲಕೋಟೆಯನ್ನು ಒಡೆದು ನೋಡಿದಳು. ವಾರ್ತೆ ಹೀಗಿತ್ತು

Delhi.......... March 1948

Ramanand Bar-at-Law,

Chowpathi, Bombay.

Await trunk call Delhi 12 a. m.

Chandraleka Kishanchand,

ತಂತಿಯನ್ನೋದಿ ಪ್ರಮೀಳಾ ಸ್ವಲ್ಪ ಹೊತ್ತು ಯೋಚಿಸಿದಳು. ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣಳಾಗಿ ನ್ಯಾಯ ಶಾಸ್ತ್ರಾಧ್ಯಯನದ ಉದ್ದೇಶದಿಂದ ಬೊಂಬಾಯಿಗೆ ಬಂದ ಅವಳು ಘಟನಾ ಕ್ರಮದಲ್ಲಿ ರಮಾನಂದರ ಕಛೇರಿಗೆ ಟೈಪಿಸ್ಟ್ ಸೆಕ್ರಿಟರಿಯಾಗಿ ಸೇರಿದಾಗಲೇ ಇಂತಹ ಸಂದರ್ಭಗಳಲ್ಲಿ ಏನು ಮಾಡಬೇಕೆಂಬುದನ್ನು ತಿಳಿದುಕೊಂಡಿದ್ದಳು. ತಂತಿ ಕೊಟ್ಟಿದ್ದ ಚಂದ್ರಲೇಖಾ ಕರಾಚಿಯ ಶ್ರೀಮಂತ ಜಮೀನ್‌ದಾರ್ ಕಿಷನ್‌ಚಂದ್ ಷಿಕಾರ್‌ಪುರಿಯ ಒಬ್ಬಳೇ ಮಗಳೆಂಬುದು ಅವಳಿಗೆ ತಿಳಿದಿತ್ತು. ಕಿಷನ್ ಚಂದನು ರಮಾನಂದನ ಹಳೆಯ ಕಕ್ಷಿಗಾರ. ಬೊಂಬಾಯಲ್ಲಿ ಅವನ ಲೇವಾದೇವಿಗೆ ಸಂಬಂಧಿಸಿದ

ಎಲ್ಲ ವ್ಯವಹಾರಗಳನ್ನೂ ರಮಾನಂದನೇ ನಿರ್ವಹಿಸುತ್ತಿದ್ದ. ಭಾರತದ ವಿಭಜನೆ ನಡೆಯುವ ಕೆಲವು ತಿಂಗಳ ಹಿಂದೆ ಅವನು ರಮಾನಂದನ ಕಛೇರಿಗೆ ಬಂದಿದ್ದಾಗ ಪ್ರಮೀಳೆಯೂ ಅಲ್ಲಿದ್ದಳು. ವಕೀಲ ಮತ್ತು ಕಕ್ಷಿಗಾರರ ನಡುವೆ ಮಾತು ಕಥೆಗಳು ಅವಳ ಎದುರಿಗೇ ನಡೆದಿದ್ದವು. ಆದರೆ ಈಚಿಗೆ ಕೆಲವು ತಿಂಗಳಿಂದ ಅವನ ವಿಚಾರ ಏನೂ ತಿಳಿದಿರಲಿಲ್ಲ. ತಿಳಿದುಕೊಳ್ಳಲು ರಮಾನಂದನು ಮಾಗ ಪ್ರಯತ್ನಗಳೆಲ್ಲ ವಿಫಲವಾಗಿದ್ದವು. ವಿಭಜನೆ ಮುಗಿದ ಕೆಲವು ವಾರಗಳ ತರುವಾಯ ಷಿಕಾರ್‌ಪುರದ ಹತ್ತಿರಿದ್ದ ತನ್ನ ಜಮೀನ್‌ದಾರಿಯನ್ನು ನೋಡಿ ಕೊಂಡು ಬರಲು ಹೋಗಿದ್ದ ಕಿಷನ್‌ಚಂದನು ಏನಾದನೆಂಬುದು ಯಾರಿಗೂ ತಿಳಿಯದು. ಆ ಘಟನೆ ನಡೆದ ಕೆಲವು ತಿಂಗಳ ಮೇಲೆ ಅವನ ಮಗಳಿಂದ ಬಂದ ತಂತಿ ವಾರ್ತೆಯನ್ನು ಕಂಡು ಪ್ರಮೀಳೆಗೆ ಸ್ವಲ್ಪ ಸಮಾಧಾನವಾಯಿತು. ರಮಾನಂದನು ನಗರದಲ್ಲಿದ್ದಿದ್ದರೆ ತಂತಿಯನ್ನು ನೋಡಿ ಎಷ್ಟೋ ಸಂತೋಷ ಪಡುತ್ತಿದ್ದನು ಎಂದು ಅವಳು ಭಾವಿಸಿದಳು. ಆದರೆ ವೃತ್ತಿಕಾರ್ಯದ ಮೇಲೆ ಪೂನಾಕ್ಕೆ ಹೋಗಿದ್ದ ಅವನು ಇನ್ನೆರಡು ದಿನಗಳು ಹಿಂದಿರುಗುವ ಸಂಭವ ವಿರಲಿಲ್ಲ. ಟ್ರಂಕ್‌ಕಾಲ್ ಬಂದಾಗ ರಮಾನಂದನ ಪ್ರತಿಯಾಗಿ ತಾನೇ ಮಾತಾಡಲು ಪ್ರಮೀಳಾ ನಿರ್ಧರಿಸಿಕೊಂಡಳು.

ತಂತಿಯಲ್ಲಿ ತಿಳಿಸಿದ್ದಂತೆ ೧೨ ಗಂಟೆ ಸುಮಾರಿಗೆ ಡೆಲ್ಲಿಯಿಂದ ಕರೆ ಬಂತು. ಎಕ್ಸ್‌ಚೇಂಜಿನ ಸಂಚಾಲಕನು "ಡೆಲ್ಲಿಯಿಂದ ರಮಾನಂದರಿಗೆ ಪರ್ಸನಲ್ ಕಾಲ್ ಬಂದಿದೆ" ಎಂದು ತಿಳಿಸಿದನು.

"ರಮಾನಂದರು ನಗರದಲ್ಲಿಲ್ಲ. ಅವರ ಪ್ರತಿಯಾಗಿ ನಾನು ಮಾತಾಡು ತ್ತೇನೆ. ನಾನು ಅವರ ಸೆಕ್ರೆಟರಿ ಪ್ರಮೀಳಾ ರಾವ್"

"ಇದು ಪರ್ಸನಲ್ ಕಾಲ್. ಆ ಕೊನೆಯಲ್ಲಿರುವವರು ಒಪ್ಪಿಕೊಂಡರೆ ಆಗಬಹುದು"—ಎಂದು ಎಕ್ಸ್‌ಚೇಂಜಿನಿಂದ ಉತ್ತರ ಬಂದಿತು.

ಕೆಲವು ನಿಮಿಷಗಳ ಅನಂತರ ಇನ್ನೊಂದು ಸ್ವರ ಕೇಳಿಸಿತು–ಹೆಣ್ಣುದನಿ.

"ಮಾತಾಡುತ್ತಿರುವುದು ಚಂದ್ರಲೇಖಾ ಕಿಷನ್‌ಚಂದ್. ರಮಾನಂದ ರಿದ್ದಿದ್ದರೆ ಚನ್ನಾಗಿತ್ತು. ಚಿಂತೆಯಿಲ್ಲ, ನಿಮ್ಮ ಸಂಗಡಲೆ ಹೇಳುತ್ತೇನೆ. ನಿಮಗೆ ನನ್ನ ತಂದೆಯವರ ಪರಿಚಯವಿರಬಹುದು"

ಎಂಟುನೂರು ಮೈಲಿ ದೂರದಿಂದ ಟೆಲಿಫೋನಿನಲ್ಲಿ ಮಾತಾಡುವಾಗಲೂ ಧ್ವನಿಯಲ್ಲಿ ವ್ಯಕ್ತಿತ್ವ ಸ್ಪಷ್ಟವಾಗಿ ಕಾಣುತ್ತಿತ್ತು. ಸಿಂಧಿಗಳು ಧರಿಸುವ ರೇಷಿಮೆ ಪಾಯ್ಜಾಮಾ, ನಿಲುವಂಗಿ, ಅಂಗವಸ್ತ್ರ, ಬಣ್ಣ ಹಚ್ಚಿದ ತುಟಿಗಳು, ತಿದ್ದಿ ಗೆದ ಹುಬ್ಬು, ಕಿನ್‌ಕಾಪಿನ ಪಾದರಕ್ಷೆ ಪ್ರಮೀಳೆಯ ಕಣ್ಣಿಗೆ ಕಟ್ಟಿದಂತಾದವು.

"ನಿಮ್ಮ ತಂತಿ ಮುಟ್ಟಿ ಸಂತೋಷವಾಯಿತು. ತಂದೆಯವರೆಲ್ಲಿದ್ದಾರೆ?"

ಕೂಡಲೆ ಉತ್ತರ ಬರಲಿಲ್ಲ. ಪ್ರಶ್ನೆ ಅನುಚಿತವೇ ಎಂದು ಪ್ರಮೀಳೆಗೆ ತೋರಿತು. ಅಲ್ಪಕಾಲಾನಂತರ ದುಗುಡದ ದನಿಯಿಂದ ಚಂದ್ರಲೇಖಾ ಹೇಳಿದಳು.

"ಪಾಕಿಸ್ಥಾನವನ್ನು ಬಿಡುವ ಮೊದಲು ಷಿಕಾರ್‌ಪುರದಲ್ಲಿ ನಡೆದ ಗಲಭೆ ಯಲ್ಲಿ ಅವರು ತೀರಿಕೊಂಡರು."

"ಕ್ಷಮಿಸು, ಚಂದ್ರಲೇಖಾ, ನನಗೆ ತಿಳಿದಿರಲಿಲ್ಲ. ಕಳೆದ ಕೆಲವು ತಿಂಗಳಿಂದ ನಿಮ್ಮ ಸುದ್ಧಿ ತಿಳಿಯಲು ನಾವು ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥ ವಾದವು. ಈಗ ಈ ದುಃಖ ವಾರ್ತೆ! ಪಾಕಿಸ್ಥಾನದಿಂದ ಹೊರಗೆ ಬರಲು ನಿಮಗೆ ಬಹಳ ತೊಂದರೆಯಾಗಿರಬೇಕಲ್ಲವೆ?"

"ನಾನು ಶರಣಾರ್ಥಿಗಳ ಒಂದು ಗುಂಪಿನ ಸಂಗಡ ಜೋಧಪುರದ ಮಾರ್ಗವಾಗಿ ಭಾರತ ತಲಪಿದೆ. ಕರಾಚಿಯಲ್ಲಿ ನಮ್ಮ ನೆರೆಯವರಾಗಿದ್ದ ಮೋಹನ್‌ಲಾಲ್ ಮುತ್ತು ನಂಬಿಕಸ್ಥನಾದ ದಾಮು ಎಂಬ ಸೇವಕನು ಸಂಗಡ ಇದ್ದುದರಿಂದ ಅಷ್ಟೇನೂ ತೊಂದರೆಯಾಗಲಿಲ್ಲ. ಷಿಕಾರ್‌ಪುರಕ್ಕೆ ಹೋಗುವ ಮೊದಲು ತಂದೆಯವರು ದಾಮೂಗೆ ಎಲ್ಲವನ್ನೂ ತಿಳಿಸಿ ಯಾವಾಗಲೂ ನನ್ನ ಸಂಗಡಿರಬೇಕೆಂದು ಹೇಳಿದ್ದರು. ಅವರಾಗಲಿ, ನಾನಾಗಲಿ ಬೊಂಬಾಯಿಗೆ ಬಂದು ರಮಾನಂದರನ್ನು ನೋಡಲು ಸಾಧ್ಯವಾಗದಿದ್ದರೆ ದಾಮುವನ್ನೇ ಕಳುಹಿಸ ಬೇಕೆಂದು ಅವರು ಯೋಚಿಸಿದ್ದರು."

"ಸುಖವಾಗಿ ಭಾರತ ತಲಪಿದಿರಲ್ಲಾ, ಸಂತೋಷ! ಈಗೇನು ಮಾಡು ೞರಿ? ಬೊಂಬಾಯಿಗೆ ಬಂದು ಎರಡು ದಿನಗಳಿರಬಾರದೆ?"

"ಈಗದು ಸಾಧ್ಯವಲ್ಲ. ಅಲ್ಲದೆ ನನ್ನ ಮದುವೆಗೆ ಕೆಲವೇ ದಿನಗಳು ಉಳಿದಿವೆ."

ತಂದೆ ಸತ್ತು ವರ್ಷ ಮುಗಿಯುವುದರಲ್ಲಿ ಮದುವೆ! ಕಕ್ಷಿಗಾರನೊಬ್ಬನ ಮಗಳ ಮದುವೆಯ ವಿಚಾರದಲ್ಲಿ ಹೆಚ್ಚು ಕುತೂಹಲವನ್ನು ವ್ಯಕ್ತಪಡಿಸುವುದು ಪ್ರಮೀಳೆಗೆ ಉಚಿತವಾಗಿ ಕಾಣಲಿಲ್ಲ. ಆದರೂ ಕೇಳಿದಳು.

"ಯಾರ ಸಂಗಡ ಮದುವೆ ?"

"ಆತನೊಬ್ಬ ಪಂಜಾಬಿ ರಜಪೂತ, ಗುಲಾಬ್‌ಸಿಂಗ್ ಎಂದು ಹೆಸರು. ಅವರ ತಂದೆ ಕರಾಚಿಯಲ್ಲಿ ದೊಡ್ಡ ವರ್ತಕರಾಗಿದ್ದರು. ನಮ್ಮ ತಂದೆಗೂ ಅವರಿಗೂ ತುಂಬಾ ಪರಿಚಯ. ನಾನೂ ಗುಲಾಬ್ ಬಾಲ್ಯದಿಂದ ಸ್ನೇಹಿತರು. ಎರಡು ವರ್ಷಗಳ ಹಿಂದೆ ಗುಲಾಬ್‌ಸಿಂಗನ ತಂದೆ ಖಾಯಿಲೆ ಬೀಳದೆ ಇದ್ದಿದ್ದರೆ ಆಗಲೆ ನಮ್ಮ ಮದುವೆಯಾಗಬೇಕಾಗಿತ್ತು"

"ಈಗ ಗುಲಾಬ್‌ಸಿಂಗ್ ಎಲ್ಲಿದ್ದಾರೆ ?"

"ಹೋದ ವರ್ಷ ಅವರ ತಂದೆ ತೀರಿಕೊಂಡರು. ಈಗ ಗುಲಾಬ್‌ಸಿಂಗ್ ನನ್ನ ಸಂಗಡ ಡೆಲ್ಲಿಯಲ್ಲೇ ಇದ್ದಾನೆ. ತಂದೆ ರಮಾನಂದರ ಕೈಗೆ ಕೊಟ್ಟಿದ್ದ ಆಭರಣಗಳು—"

ಚಂದ್ರಲೇಖಾ ಮಾತು ಮುಗಿಸದೆ ಮಧ್ಯದಲ್ಲಿ ನಿಲ್ಲಿಸಿದಳು. ಕ್ಷಣಕಾಲ ಸುಮ್ಮನಿದ್ದು ಪ್ರಮೀಳಾ ನುಡಿದಳು.

"ಅವು ಸುರಕ್ಷಿತವಾಗಿವೆ. ಬೇಕಾದಾಗ ಬಂದು ತೆಗೆದುಕೊಳ್ಳಬಹುದು."

"ಕೇಳಿ ಸಮಾಧಾನವಾಯಿತು. ತಂದೆಯವರ ಆಸ್ತಿಯಲ್ಲಿ ಈಗ ಉಳಿದಿರುವುದು ಆ ಆಭರಣಗಳು ಮಾತ್ರವೇ. ಕರಾಚಿಯಲ್ಲಿ ಹಿಂದೂಗಳ ದುರವಸ್ಥೆ ಹೇಳತೀರದು. ಮನೆಯಿಂದ ಹೊರಗೆ ಹೋಗಿ ಹಿಂದಿರುಗುವುದರಲ್ಲಿ ಏನಾಗುವುದೆಂದು ತಿಳಿಯುತ್ತಿರಲಿಲ್ಲ. ಕಳ್ಳರು ಕೊಳ್ಳೆ ಹೊಡೆಯಬಹುದು. ಮುಸ್ಲಿಂ ಶರಣಾರ್ಥಿಯೊಬ್ಬನು ಮನೆಯನ್ನು ಆಕ್ರಮಿಸಿಕೊಂಡು ನಿಮ್ಮನ್ನು ಹೊರದೂಡಬಹುದು. ಪುಂಡರ ಗುಂಪು ಮನೆಗೆ ಬೆಂಕಿ ಹತ್ತಿಸಬಹುದು. ಅಲ್ಲಿ ಎಲ್ಲವೂ ಸಾಧ್ಯ ಈಗಿನ ಸಂದರ್ಭದಲ್ಲಿ"

" ನೀವು ಪಾರಾದಿರಲ್ಲ ಸಂತೋಷ. ಆಭರಣಗಳನ್ನು ತೆಗೆದುಕೊಂಡು ಹೋಗಲು ಯಾವಾಗ ಬರುವಿರಿ ?"

" ನಾನು ಬರುವುದಿಲ್ಲ. ನನ್ನ ಪ್ರತಿಯಾಗಿ ಗುಲಾಬ್‌ಸಿಂಗ್ ಬರುತ್ತಾನೆ. ಇಂದು ರಾತ್ರಿ ವಿಮಾನದಲ್ಲಿ ಡಿಲ್ಲಿಯಿಂದ ಹೊರಟು ನಾಳೆ ಬೆಳಿಗ್ಗೆ ಬೊಂಬಾಯ್ ತಲಪುತ್ತಾನೆ. ಅವನಿಗೆ ಎಲ್ಲ ವಿಷಯಗಳನ್ನೂ ತಿಳಿಸಿದ್ದೇನೆ. ನೀವು ಆಭರಣ ಗಳನ್ನು ಅವನ ಕೈಗೆ ಕೊಡಬಹುದು.''

ಲಕ್ಷಾಂತರ ರೂಪಾಯಿ ಬೆಲೆ ಬಾಳುವ ಆಭರಣಗಳನ್ನು ಟೆಲಿಫೋನಿನಲ್ಲಿ ಈ ರೀತಿ ವಿಲೇ ಮಾಡುವುದು ಪ್ರಮೀಳೆಗೆ ಸೂಕ್ತವಾಗಿ ತೋರಲಿಲ್ಲ. " ನಾಳೆ ರಮಾನಂದರು ಪೂನಾದಿಂದ ಬರುತ್ತಾರೆ. ಅವರಿಗೆ ಎಲ್ಲವನ್ನೂ ತಿಳಿಸುತ್ತೇನೆ. ಡಿಲ್ಲಿಯಲ್ಲಿ ನಿಮ್ಮ ವಿಲಾಸವೇನು ತಿಳಿಸಿ. ಪತ್ರ ಬರೆಯುತ್ತೇನೆ."

" ನಾನು ಡಿಲ್ಲಿಯಲ್ಲಿರುವುದಿಲ್ಲ. ರಾಜಪುತಾಣದಲ್ಲಿ ಗುಲಾಬ್‌ಸಿಂಗನ ಜಮಿನ್‌ದಾರಿಯಿದೆ. ನಾಳೆ ನಾನು ಅಲ್ಲಿಗೆ ಹೋಗುತ್ತೇನೆ. ಅಲ್ಲಿಂದಲೇ ಪತ್ರ ಬರೆಯುತ್ತೇನೆ."

ಎಂದು ಚಂದ್ರಲೇಖಾ ಮಾತು ಮುಗಿಸಿದಳು. ಅಷ್ಟು ಹೊತ್ತಿಗೆ ಮೂರು ನಿಮಿಷದ ಪರಿಮಿತಿ ಮುಗಿದದ್ದರಿಂದ ಆಪರೇಟರ್ ಸಂಬಂಧ ಸೂತ್ರವನ್ನು ಕತ್ತರಿಸಿದ.

ಮರುದಿನ ಪ್ರಮೀಳಾ ಎಂದಿಗಿಂತ ಮುಂಚಿತವಾಗಿ ಕಛೇರಿಗೆ ಬಂದು ಗುಲಾಬ್‌ಸಿಂಗನಿಗಾಗಿ ಕಾದು ಕುಳಿತಳು. ಅವನು ಬರಲಿಲ್ಲ. ಹನ್ನೊಂದು ಗಂಟೆ ಸುಮಾರಿಗೆ ಟೆಲಿಫೋನ್ ಕರೆಬಂತು. ಪ್ರಮೀಳಾ ರಿಸೀವರ್ ತೆಗೆದು ಕೊಂಡು ಹೇಳಿದಳು.

"ರಮಾನಂದರ ಕಛೇರಿಯಿಂದ. ಮಾತಾಡುತ್ತಿರುವುದು ಪ್ರಮೀಳಾರಾವ್. ಏನು ಬೇಕಾಗಿತ್ತು ?''

" ಗುಲಾಬ್‌ಸಿಂಗ್ ಮಾತಾಡುತ್ತಿರುವುದು. ಪ್ರಾತಃಕಾಲ ವಿಮಾನದಲ್ಲಿ ಬೊಂಬಾಯಿಗೆ ಬಂದೆ. ನೀವು ನನ್ನನ್ನು ನಿರೀಕ್ಷಿಸುತ್ತಿದ್ದಿರಲ್ಲವೆ ?''

"ಹೌದು, ನೀವು ಡಿಲ್ಲಿಯಿಂದ ಹೊರಟಿರೋ ಇಲ್ಲವೋ ಸಂದೇಹ ವಾಗಿತ್ತು. ಈಗ ಎಲ್ಲಿಂದ ಮಾತಾಡುತ್ತಿದ್ದೀರಿ ?''

"ಬೋರಿ ಬಂದರಿನ ಒಂದು ಹೋಟಲಿಂದ"

"ರಮಾನಂದರು ಪೂನಾದಿಂದ ಇನ್ನೂ ಹಿಂದಿರುಗಿಲ್ಲ. ಹನ್ನೆರಡು ಗಂಟೆಗೆ ಬರುವ ನಿರೀಕ್ಷೆಯಿದೆ. ನೀವು ನೇರವಾಗಿ ಕಛೇರಿಗೆ ಬಂದರೆ ಅವರನ್ನು ನೋಡ ಬಹುದು. ಪರಿಚಯ ಪತ್ರ ಸಂಗಡ ತಂದಿದ್ದೀರಾ ?"

"ಈ ದಿನ ನಾನು ನಿಮ್ಮ ಕಛೇರಿಗೆ ಬರುವುದಿಲ್ಲ. ಕಾರಣ ಆ ಮೇಲೆ ತಿಳಿಸುತ್ತೇನೆ. ರಮಾನಂದರನ್ನು ಸಾಯಂಕಾಲ ನೋಡುತ್ತೇನೆ. ಈಗ ನೀವು ದಯಮಾಡಿ ನಾನು ಇಳಿದುಕೊಂಡಿರುವ ಹೋಟಲಿಗೆ ಬರುವುದು ಸಾಧ್ಯವೆ? ನಿಮ್ಮ ಸಂಗಡ ಮಾತಾಡಬೇಕಾಗಿದೆ.''

ಪ್ರಮೀಳೆಗೆ ಸಲಹೆ ವಿಚಿತ್ರವಾಗಿ ಕಂಡಿತು. ರಮಾನಂದರ ಶ್ರೀಮಂತ ಕಕ್ಷಿಗಾರನನ್ನು ಅಸಮಾಧಾನಗೊಳಿಸಬಾರದೆಂದು "ಯಾವ ವಿಚಾರ ಮಾತಾಡ ಬೇಕಾಗಿದೆ ?" ಎಂದು ಕೇಳಿದಳು.

"ಆಭರಣಗಳ ವಿಚಾರವಾಗಿಯೇ. ಚಂದ್ರಲೇಖಾ ಪರಿಚಯ ಪತ್ರ ಕೊಡದಿದ್ದರೂ ಕೆಲವು ರಹಸ್ಯ ವಿಚಾರಗಳನ್ನು ತಿಳಿಸಿದ್ದಾಳೆ. ಅದನ್ನು ರಮಾ ನಂದರ ಹತ್ತಿರ ಪ್ರಸ್ತಾಪಿಸುವ ಮೊದಲು ನಿಮ್ಮ ಸಲಹೆ ಕೇಳಬೇಕಾಗಿದೆ.''

"ನನ್ನ ಸಲಹೆಯೇತಕ್ಕೆ ಬೇಕು ?"

"ಅದು ಚಂದ್ರಲೇಖಾ ಅಪೇಕ್ಷೆ. ರಮಾನಂದರು ಕಿಷನ್‌ಚಂದರಿಗೆ ಒಂದು ಗುರುತಿನ ವಸ್ತು ಕೊಟ್ಟಿದ್ದರು. ನಿಮಗೆ ತಿಳಿದಿದೆಯೇ ಅದು ?''

"ನನಗೆ ತಿಳಿಯದು"

"ಅದು ನನ್ನ ಹತ್ತಿರಿದೆ. ಕಮಲ ಮತ್ತು ತ್ರಿಶೂಲ."

ಪ್ರಮೀಳಾ ಕೂಡಲೆ ಉತ್ತರ ಕೊಡಲಿಲ್ಲ. ಅಲ್ಪಕಾಲಾನಂತರ "—ರಸ್ತೆ ಯಲ್ಲಿ ವಸಂತ ವಿಹಾರ ಹೋಟಲಿನಲ್ಲಿ ನಾನು ವಾಸ ಮಾಡುವುದು. ನಾಲ್ಕು ಗಂಟೆಗೆ ಅಲ್ಲಿಗೆ ಬಂದರೆ ನನ್ನನ್ನು ನೋಡಬಹುದು''

"ಬರುತ್ತೇನೆ, ತೊಂದರೆ ಕ್ಷಮಿಸಿ"

ನಿರೀಕ್ಷಣೆಯಂತೆ ಆ ದಿನ ರಮಾನಂದನು ಹಿಂದಿರುಗಲಿಲ್ಲ. ೧ ಗಂಟೆ ಸುಮಾರಿಗೆ ಫೋನ್ ಮಾಡಿ ಸಂಜೆ ಎಂಟು ಗಂಟೆಗೆ ಬರುವುದಾಗಿ ತಿಳಿಸಿದನು. ಪ್ರಮೀಳಾ ಕಛೇರಿಯ ಕೆಲಸಗಳನ್ನು ಮುಗಿಸಿಕೊಂಡು ನಾಲ್ಕು ಗಂಟೆಗೆ ಸರಿಯಾಗಿ ವಸಂತ ವಿಹಾರಕ್ಕೆ ಹೋದಳು. ಒಂದು ಗಂಟೆ ಕಾದರೂ ಗುಲಾಬ್ ಸಿಂಗನು ಬರಲಿಲ್ಲ. ನಿರಾಶಳಾಗಿ ತಿರುಗಾಡಿ ಬರಲು ಹೊರಗೆ ಹೋಗುತ್ತಿದ್ದಾಗ ಹೋಟಲ್ ಮಾಣಿ "ಹುಡುಗನೊಬ್ಬನು ಈ ಕಾಗದ ತಂದುಕೊಟ್ಟನು" ಎಂದು ಹೇಳಿ ಲಕೋಟೆಯೊಂದನ್ನು ಕೊಟ್ಟನು. ಮೇಲೆ "ಕುಮಾರಿ ಪ್ರಮೀಳಾ ರಾವ್—ವಸಂತ ವಿಹಾರ್" ಎಂದು ವಿಳಾಸ ಬರೆದಿತ್ತು. ಒಡೆದು ನೋಡಿದಳು. ಪತ್ರ ಈ ರೀತಿಯಾಗಿತ್ತು:

"ಈ ಪ್ರಾತಃಕಾಲದಿಂದ ನನ್ನನ್ನು ಯಾರೋ ಹೊಂಚುಹಾಕಿ ಹಿಂಬಾಲಿಸುತ್ತಿದ್ದಾರೆ. ನನ್ನ ಸಂಗಡ ವಿಮಾನದಲ್ಲಿ ಅಪರಿಚಿತನೊಬ್ಬನು ಬೊಂಬಾಯಿಗೆ ಬಂದನು. ಅವನು ನಾನು ಹೋದ ಕಡೆಗೆಲ್ಲಾ ಕಾರಲ್ಲಿ ಹಿಂಬಾಲಿಸಿ ಬರುತ್ತಿದ್ದಾನೆ. ನನಗೆ ಸಂದೇಹವಾಗುತ್ತಿದೆ. ಅವನಿಂದ ತಪ್ಪಿಸಿಕೊಳ್ಳಲು ತಾರ್ದೇವಿಯ ೨೯ನೆ ನಂಬರ್ ಮನೆಯಲ್ಲಿ ವಾಸ ಮಾಡುವ ನನ್ನ ಸ್ನೇಹಿತನೊಬ್ಬನ ಆಶ್ರಯ ಪಡೆದಿದ್ದೇನೆ. ನಾಳೆ ಪ್ರಾತಃಕಾಲ ೧೦ ಗಂಟೆಗೆ ನೀವೇ ಅಲ್ಲಿಗೆ ಬರಬೇಕಾಗಿ ಬೇಡುತ್ತೇನೆ. ನನ್ನ ಮಿತ್ರನ ಹೆಸರು ಕಿಶೋರಸಿಂಗ್. ಅವನ ವಾಸ ಮೇಲಿನ ವಠಾರದ ನಾಲ್ಕನೆ ಅಂತಸ್ಥಿನಲ್ಲಿ. ನೀವು ದಯಮಾಡಿ ಅಲ್ಲಿಗೆ ಬಂದರೆ ನನ್ನ ಪರಿಚಯದ ಸಂಕೇತ ತೋರಿಸುತ್ತೇನೆ. ಆ ಮೇಲೆ ಉಳಿದ ವಿಚಾರಗಳನ್ನು ಮಾತಾಡಬಹುದು."

ಪತ್ರದ ಕೊನೆಯಲ್ಲಿ ರುಜುವಿರಲಿಲ್ಲ. ಅದರ ಬದಲಿಗೆ ಕಮಲ ಮತ್ತು ತ್ರಿಶೂಲದ ಗುರುತು ಮಾಡಿತ್ತು. ಪತ್ರವನ್ನು ನೋಡಿ ಪ್ರಮೀಳೆ ಚಕಿತೆಯಾದಳು. ವಕೀಲ ವೃತ್ತಿಯ ಒಂದು ಸಾಮಾನ್ಯ ಘಟನೆ ರಹಸ್ಯಮಯ ಪತ್ತೆದಾರಿ ಪ್ರಸಂಗದ ರೂಪ ತಾಳುತ್ತಿದೆಯೆಂದು ಅವಳು ತಿಳಿದಳು. ಸಂಜೆ ರಮಾನಂದನು ಬಂದ ಕೂಡಲೆ ಅವನಿಗೆ ಎಲ್ಲವನ್ನೂ ತಿಳಿಸಿ ಅನಂತರ ಮುಂದಿನ ಕಾರ್ಯವನ್ನು ನಿರ್ಧರಿಸಲು ಯೋಚಿಸಿ ಹೊರಗೆ ಹೋದಳು.

[2

# ಎರಡನೆಯ ಪರಿಚ್ಛೇದ

ನಾವು ಮೇಲೆ ವಿವರಿಸಿದ ಘಟನೆಗಳು ನಡೆಯುವುದಕ್ಕೆ ಒಂದು ವರ್ಷ ಮೊದಲು, ಅಂದರೆ ೧೯೪೭ನೆ ಇಸ್ವಿಯಲ್ಲಿ ನಡೆದ ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ರತ್ನಖಚಿತವಾದ ಕೆಲವು ಅಪೂರ್ವ ಆಭರಣಗಳು ಪ್ರದರ್ಶಿತ ವಾಗಿದ್ದುದು ಆ ವರ್ಷ ಪ್ರದರ್ಶನವನ್ನು ನೋಡಿದವರಿಗೆ ನೆನಪಿರಬಹುದು. ಲಕ್ಷಾಧಿಕ ಪ್ರೇಕ್ಷಕರು–ಅವರಲ್ಲಿ ಸ್ತ್ರೀಯರೇ ಹೆಚ್ಚು–ಅವುಗಳನ್ನು ನೋಡಿದರು. ಆಭರಣಗಳು ಬಹು ಬೆಲೆಯುಳ್ಳವುಗಳಾಗಿದ್ದುದರಿಂದ ರಕ್ಷಣೆಗೆ ವಿಶೇಷ ಏರ್ಪಾಡು ಮಾಡಲ್ಪಟ್ಟಿತ್ತು.

ಆ ಸಂಗ್ರಹದಲ್ಲಿ ಕೆಲವು ಅಪೂರ್ವ ತೊಡವುಗಳಿದ್ದವು. ಕಾವ್ಯಗಳಲ್ಲಿ ವರ್ಣಿಸಲ್ಪಟ್ಟು, ಚಿತ್ರಗಳಲ್ಲಿ ಮಾತ್ರವೆ ಇದುವರೆಗೆ ಜನರು ನೋಡಿದ್ದ ಕೆಲವು ಆಭರಣಗಳು ಸಂಗ್ರಹದಲ್ಲಿದ್ದವು. ತಲೆಗೆ ಕಟ್ಟುವ ಚಂದ್ರಮುಡಿ, ಮುತ್ತಿನ ಜಾಲರದ ಒಡ್ಯಾಣ, ತೋಳಿಗೆ ಕಟ್ಟುವ ಬಾಜೂಬಂದ್, ಮತ್ತು ರತ್ನಹಾರ ಅದರಲ್ಲಿ ಮುಖ್ಯವಾದವು. ಆಭರಣಗಳು ರಾಜಪುತಾಣದ ಒಂದು ಪ್ರಾಚೀನ ರಾಜಮನೆತನಕ್ಕೆ ಸೇರಿದ್ದೆಂದೂ, ಕೋಹಿನೂರಿಗೆ ಸರಿದೂಗುವ ಕೆಲವು ಅನರ್ಘ್ಯ ರತ್ನಗಳು ಅವುಗಳಲ್ಲಿರುವವೆಂದೂ ಜನಜನಿತವಾಗಿತ್ತು. ಪ್ರದರ್ಶನ ಕಾಲದಲ್ಲಿ ಕೆಲವು ಗಂಟೆಗಳು ಮಾತ್ರವೇ ಆಭರಣಗಳನ್ನು ನೋಡಬಹುದಾಗಿತ್ತು. ಪ್ರದರ್ಶನ ಮುಗಿಯುವುದಕ್ಕೆ ಮೂರು ದಿನಗಳ ಮೊದಲೇ ಆಭರಣಗಳು ಪೋಲೀಸರ ರಕ್ಷಣೆಯಲ್ಲಿ ಬೊಂಬಾಯಿಗೆ ಕಳುಹಿಸಲ್ಪಟ್ಟವು.

ಆ ತರುವಾಯ ಒಂದು ವಾರದ ಮೇಲೆ ಬ್ಯಾರಿಸ್ಟರ್ ರಮಾನಂದರಾಯನು ಬೊಂಬಾಯಿನ ತನ್ನ ಕಛೇರಿಯಲ್ಲಿ ಕುಳಿತಿದ್ದಾಗ ಕಿಷನ್‌ಚಂದನು ಅವನನ್ನು ನೋಡಲು ಬಂದನು. ಕಿಷನ್‌ಚಂದನು ರಮಾನಂದನ ಹಳೆಯ ಕಕ್ಷಿಗಾರ

ನೆಂಬುದನ್ನು ಹಿಂದೆ ತಿಳಿಸಿದ್ದೇವೆ. ಕಾರಣ ಬೊಂಬಾಯಿಗೆ ಬಂದಾಗಲೆಲ್ಲ ರಮಾನಂದನನ್ನು ನೋಡಿ ಹೋಗುವುದು ಅವನ ಪದ್ಧತಿಯಾಗಿತ್ತು.

ಕಿಷನ್‌ಚಂದನು ಬಂದಾಗ ರಮಾನಂದ್ ವ್ಯವಹಾರಕ್ಕೆ ಸಂಬಂಧಿಸಿದ ಕೆಲವು ಕಾಗದ ಪತ್ರಗಳನ್ನು ಪ್ರಮೀಳೆಗೆ ಡಿಕ್ಟೇಟ್ ಮಾಡುತ್ತಿದ್ದನು. "ನಿಮ್ಮೊಡನೆ ಪ್ರತ್ಯೇಕವಾಗಿ ಮಾತಾಡಬೇಕಾಗಿದೆ" ಎಂದು ಕಿಷನ್‌ಚಂದ್ ಹೇಳಿದನು.

"ಪ್ರಮೀಳಾ ನನ್ನ ಸೆಕ್ರೆಟರಿ. ನನ್ನ ವ್ಯವಹಾರದ ಎಲ್ಲ ವಿಷಯಗಳೂ ಅವಳಿಗೆ ತಿಳಿದಿದೆ. ನೀವು ಸಂಕೋಚವಿಲ್ಲದೆ ಅವಳೆದುರಿಗೆ ಮಾತಾಡ ಬಹುದು."—ಎಂದು ರಮಾನಂದ್ ಉತ್ತರ ಕೊಟ್ಟನು.

"ಹಾಗಿದ್ದರೆ ಒಳ್ಳೆಯದೇ ಆಯಿತು. ನಿಮ್ಮಿಂದ ನನಗೊಂದು ದೊಡ್ಡ ಉಪಕಾರವಾಗಬೇಕಾಗಿದೆ" ಎಂದು ಹೇಳಿ ಕಿಷನ್‌ಚಂದನು ನಿಲುವಂಗಿಯ ಜೇಬಿನಿಂದ ತೆಳುವಾದ ಚರ್ಮದ ಕರಂಡವೊಂದನ್ನು ತೆಗೆದು ಮುಚ್ಚಳ ಬಿಚ್ಚಿ ತೋರಿಸಿದನು. ಕರಂಡದಲ್ಲಿ ರೇಷಿಮೆಯ ಮೆತ್ತೆಯ ಮೇಲೆ ಆ ವಿಖ್ಯಾತ ರತ್ನಹಾರ, ನೈಶಾಕಾಶದಲ್ಲಿ ನಕ್ಷತ್ರ ಮಾಲೆಯಂತೆ ಮಿರುಗುತ್ತಿತ್ತು. ಅದರ ಕಾಂತಿಯಿಂದ ರಮಾನಂದ್ ಕಣ್ಣು ಮುಚ್ಚಿದನು. ಪ್ರಮೀಳೆ ಎವೆಯಾಡಿಸು ವುದನ್ನೂ ಮರೆತು ಅದನ್ನೇ ನೋಡುತ್ತಿದ್ದಳು.

"ಈ ರತ್ನಹಾರವನ್ನು ಕೆಲವು ದಿನಗಳು ರಹಸ್ಯವಾಗಿ ನಿಮ್ಮಲ್ಲಿಟ್ಟು ಕೊಂಡಿರ ಬಲ್ಲಿರಾ?"

ಕಿಷನ್‌ಚಂದ್ ಕೇಳಿದನು.

"ಯಾವುದಾದರೊಂದು ಬ್ಯಾಂಕಿನ ಸೇಫ್ ಡಿಪಾಜಟ್ಟಿನಲ್ಲಿಡಲು ಏರ್ಪಡಿಸುತ್ತೇನೆ."

"ಸೇಫ್ ಡಿಪಾಜಟ್‌ನಲ್ಲಿದ್ದದ್ದನ್ನು ವಾಪಸು ತಂದಿದ್ದೇನೆ. ಈಗಿನ ಪರಿಸ್ಥಿತಿಯಲ್ಲಿ ಬ್ಯಾಂಕಿನಲ್ಲಿಡುವುದು ಸುರಕ್ಷಿತವಲ್ಲದ್ದರಿಂದಲೆ ನಿಮ್ಮ ಹತ್ತಿರಿಟ್ಟು ಕೊಳ್ಳುವಂತೆ ಹೇಳುತ್ತಿದ್ದೇನೆ."

ರಮಾನಂದ್ ಆಶ್ಚರ್ಯಾನ್ವಿತನಾಗಿ ಪ್ರಶ್ನಿಸಿದನು.—"ನಿಮ್ಮ ಅಭಿ ಪ್ರಾಯದ ಕಾರಣ?"

“ಭಾರತ ವಿಭಜನೆಯಾಗಿ ಪಾಕಿಸ್ಥಾನ್ ಸ್ಥಾಪಿತವಾದರೆ ಸಿಂಧ್ ಪ್ರಾಂತದಲ್ಲಿ ಹಿಂದುಗಳಿಗೆ ರಕ್ಷಣೆಯಿರುವುದಿಲ್ಲ. ಈಗಾಗಲೆ ಅದರ ಲಕ್ಷಣಗಳು ಕಾಣುತ್ತಿವೆ. ಸಿಂಧಿನ ಮುಸ್ಲಿಮರು ಹಿಂಪೂಗಳ ಆಸ್ತಿಪಾಸ್ತಿ, ಜಮೀನು ಜಟ್ಟರೆ, ಅಂಗಡಿ ಮುಂಗಟ್ಟುಗಳ ಮೇಲೆ ಕಣ್ಣು ಹಾಕಿದ್ದಾರೆ. ವಿಭಜನೆಯಾಗಿ ತಮ್ಮ ಸರ್ಕಾರ ಸ್ಥಾಪಿತವಾಗುವುದೇ ತಡ, ನ್ಯಾಯವಾಗಿಯೋ ಅನ್ಯಾಯ ವಾಗಿಯೋ ಅವುಗಳನ್ನು ಸ್ವಾಧೀನ ಪಡಿಸಿಕೊಳ್ಳುವದು ಅವರ ಯೋಚನೆ. ಆದ್ದರಿಂದರೆ ಮುಂಜಾಗ್ರತೆಯಿಂದ ನಾನು ವ್ಯಾಪಾರ ನಿಲ್ಲಿಸಿ, ಜಮೀನ್‌ವಾರಿ ಯನ್ನು ವಿಕ್ರಯ ಮಾಡಿ ಕರಾಚಿ ಬಿಡಲು ನಿರ್ಧರಿಸಿದ್ದೇನೆ.”

“ನಿಮ್ಮ ಭೀತಿ ನಿರಾಧಾರವಾದದ್ದು ಸೇಟ್ಜಿ. ನಾನು ಹೇಳುತ್ತಿರುವುದು, ರತ್ನಹಾರವನ್ನು ಬೊಂಬಾಯಿನ ಯಾವುದಾದರೂ ಬ್ಯಾಂಕಿನಲ್ಲಿಡಬಹುದು ಎಂದು.”

“ಅದು ಕೂಡಾ ಸುರಕ್ಷಿತವಲ್ಲ. ವಿಭಜನೆಯಾದ ಮೇಲೆ ಏನಾಗುವು ದೆಂಬುದನ್ನು ನೀವೇ ನೋಡುತ್ತೀರಿ. ಅಲ್ಲಿಯ ಮುಸ್ಲಿಮರ ಅನುಭವ ನನಗೆ ಚನ್ನಾಗಿದೆ. ಬ್ಯಾಂಕಿನಲ್ಲಿಟ್ಟರೆ ನನ್ನ ಮೇಲೆ ಕಳುವಿನ ಆಪಾದನೆ ಹೊರಿಸಿ ಕೋರ್ಟಿನ ಮುಖಾಂತರ ತಮ್ಮ ವಶಪಡಿಸಿಕೊಳ್ಳಲು ಪ್ರಯತ್ನಿಸಬಹುದು. ಇದನ್ನು ಮೈಸೂರು ವಸ್ತು ಪ್ರದರ್ಶನಕ್ಕೆ ಕಳುಹಿಸಿದ್ದರ ಉದ್ದೇಶ ಕರಾಚಿ ಯಿಂದ ಅದನ್ನು ಹೊರಗೆ ತರುವುದೇ. ಕರಾಚಿಯ ಮುಸ್ಲಿಂ ಜಮೀನ್‌ದಾರ ನೊಬ್ಬನು ಹಾರವನ್ನು ತನಗೆ ಮಾರಬೇಕಾಗಿ ಕೇಳುತ್ತಿದ್ದಾನೆ. ಪ್ರದರ್ಶನ ದಿಂದ ರತ್ನಹಾರ ಹಿಂದಿರುಗಿದ ಮೇಲೆ ಯೋಚಿಸುವುದಾಗಿ ಹೇಳಿದ್ದೇನೆ. ಇದನ್ನು ನಾನು ಕರಾಚಿಗೆ ಹಿಂದಕ್ಕೆ ತೆಗೆದುಕೊಂಡು ಹೋದರೆ ಅವನೂ ಅವನ ಮಿತ್ರರಾದ ದರೋಡೆಕೋರ ಅಧಿಕಾರಿಗಳೂ ಅದನ್ನು ತಮ್ಮ ವಶಪಡಿಸಿಕೊಳ್ಳಲು ಸರ್ವ ಪ್ರಯತ್ನಗಳನ್ನೂ ಮಾಡುವರು.”

“ಹಾಗಾದರೆ ಈಗ ನಿಮ್ಮ ಉದ್ದೇಶ ?”

“ಹಾರವನ್ನು ನಿಮ್ಮಲ್ಲಿಟ್ಟು ಕರಾಚಿಗೆ ಹಿಂದಿರುಗುವುದು. ಬೊಂಬಾಯಲ್ಲಿ ನನಗೆ ಬೇಕಾದ ಸರಾಫರೊಬ್ಬರಿದ್ದಾರೆ. ಅವರ ಸಹಾಯದಿಂದ ಇದರಂತೆಯೇ ಇರುವ ಕೃತಕ ರತ್ನಹಾರವೊಂದನ್ನು ತಯಾರಿಸಿದ್ದೇನೆ. ಅದನ್ನು ಆ ಸಿಂಧ್

ಜಮೀನ್‌ದಾರನಿಗೆ ತೋರಿಸಿ ಬೆಲೆ ನಿರ್ಧರಿಸುವುದರಲ್ಲಿ ಕೆಲವು ತಿಂಗಳು ಕಳೆಯಬಹುದು. ಅಷ್ಟರಲ್ಲಿ ಅಲ್ಲಿಯ ನನ್ನ ವ್ಯವಹಾರಗಳನ್ನು ಮುಗಿಸಿಕೊಂಡು ಮಗಳೊಡನೆ ಒಂದೇ ಸಾರಿಗೆ ಕರಾಚಿ ಬಿಡುವುದು."

ಎಂದು ಹೇಳಿ ಕಿಷನ್‌ಚಂದನು ಜೇಬಿನಂತೆ ಮೊದಲಿನ ಕರಂಡದ ಮಾದರಿಯ ಇನ್ನೊಂದು ಕರಂಡವನ್ನು ಹೊರಗೆ ತೆಗೆದು ರಮಾನಂದನ ಕೈಗೆ ಕೊಟ್ಟನು. ಅದರಲ್ಲಿ ಇನ್ನೊಂದು ರತ್ನಹಾರವಿದ್ದಿತು. ಆಕೃತಿಯಲ್ಲಿ, ಜೋಡಿಸಿದ್ದ ರತ್ನಗಳ ಜೋಡಿಪಿನಲ್ಲಿ, ಚಿನ್ನದ ಸರದಲ್ಲಿ ಎರಡು ಹಾರಗಳಿಗೂ ಅಂತರವೇ ಕಾಣುತ್ತಿರಲಿಲ್ಲ."

" ಇವುಗಳಲ್ಲಿ ನಿಜವಾದ ಹಾರ ಯಾವುದು ? ಕೃತಕ ಹಾರ ಯಾವುದು ಎಂಬುದನ್ನು ಗುರುತಿಸಲು ಆಗುವಂತೆಯೇ ಇಲ್ಲ. ನಿಮ್ಮ ಸರಾಫನ ಕೆಲಸಗಾರರು ಬಹಳ ಬುದ್ಧಿವಂತರು "—ರಮಾನಂದ್ ಹೇಳಿದನು.

ಕಿಷನ್‌ಚಂದನು ಮೃದುವಾಗಿ ನಕ್ಕು " ನೀವೊಬ್ಬರೇ ಏನು ? ಲಕ್ಷಾಂತರ ಜನರು ಮೋಸ ಹೋಗಿದ್ದಾರೆ. ಕೃತಕ ಹಾರವನ್ನೇ ನಿಜವಾದ ಹಾರವೆಂದು ತಿಳಿದು ನೋಡಿ ನೋಡಿ ಅಚ್ಚರಿಗೊಂಡಿದ್ದಾರೆ " ಎಂದನು.

" ನೀವು ಹೇಳುವುದೇನು ? ಹಾಗಾದರೆ ಮೈಸೂರಲ್ಲಿ ಪ್ರದರ್ಶಿತವಾದದ್ದು ಕೃತಕ ಹಾರವೆ ?"

ಕಿಷನ್‌ಚಂದನು ಕರಂಡದ ತಳದಲ್ಲಿ ಅಂಟಿಸಿದ್ದ ಪ್ರದರ್ಶನದ ಗುರುತನ್ನು ತೋರಿಸಿ " ಮೂಲವಿಗ್ರಹ ಬೊಂಬಾಯಿನ ನನ್ನ ಸರಾಫ್ ಮಿತ್ರನ ಸೇಫ್ ಡಿಪಾಜಿಟ್ಟಲ್ಲಿ ಸುರಕ್ಷಿತವಾಗಿತ್ತು. ಮೈಸೂರಲ್ಲಿ ಜನರ ಕಣ್ಣುಗಳನ್ನು ಕೂರೈಸಿದ್ದು ಈ ಮೆರವಣಿಗೆಯ ವಿಗ್ರಹ " ಎಂದನು.

ಎರಡು ಕರಂಡಗಳನ್ನೂ ತಿರುಗಿಸಿ ತಿರುಗಿಸಿ ನೋಡುತ್ತಿದ್ದ ಪ್ರಮೀಳಾ. " ಇವುಗಳ ಬೆಲೆಯೇನಾಗಬಹುದು ಸೇಟ್ಜಿ ?" ಎಂದು ಕೇಳಿದಳು.

" ನಿಜವಾದ ಹಾರದ ಬೆಲೆ ಹತ್ತು ಲಕ್ಷ, ಕೃತಕ ಹಾರದ ಬೆಲೆ ಹತ್ತು ಸಾವಿರ. ಚತುರನಾದ ಸ್ವರ್ಣಕಾರನೊಬ್ಬನು ಒಂದು ತಿಂಗಳು ಈ ಕೆಲಸ

ಮಾಡಿದನು. ಇದಕ್ಕಾಗಿ ಉಪಯೋಗಿಸಿರುವ ಚಿನ್ನ ಮತ್ತು ಹರಳುಗಳ ಬೆಲೆ ಐದು ಸಾವಿರಕ್ಕೆ ಮೀರುವುದಿಲ್ಲ. ಮಜೂರಿ ಮತ್ತು ಬಹುಮಾನವಾಗಿ ಐದು ಸಾವಿರ ಕೊಟ್ಟಿದ್ದೇನೆ.''

ಪ್ರಮೀಳಾ ನಿಜವಾದ ಹಾರದ ಕಡೆ ತಿರುಗದೆ ಕೃತಕ ಹಾರವನ್ನು ಹೆಚ್ಚು ಆಸಕ್ತಿಯಿಂದ ನೋಡುತ್ತಿರುವುದನ್ನು ಕಂಡು ಕಿಷನ್‌ಚಂದ್ ನಕ್ಕು ಹೇಳಿದನು! "ನಿಜವನ್ನು ಬಿಟ್ಟು ಕೃತಕವನ್ನೇ ನೀವು ಮೆಚ್ಚಿಕೊಳ್ಳುತ್ತಿದ್ದೀರಿ, ಪ್ರಮೀಳಾ ದೇವಿ. ಈಗಿನ ಜನರ ಪ್ರಕೃತಿಯೇ ಹಾಗೆಂದು ಕಾಣುತ್ತದೆ. ನಾನಿದನ್ನು ಕರಾಚಿಗೆ ತೆಗೆದುಕೊಂಡು ಹೋಗುವ ಅವಶ್ಯಕತೆಯಿಲ್ಲದಿದ್ದರೆ ಸಂತೋಷದಿಂದ ಇದನ್ನು ನಿಮಗೆ ಬಹುಮಾನ ಕೊಡುತ್ತಿದ್ದೆ. ನನ್ನ ಮಗಳು ಚಂದ್ರಲೇಖಾ ವಿಚಾರದಲ್ಲಿ ಸ್ವಲ್ಪ ಹೆಚ್ಚು ಆಸಕ್ತಿಯ ಹೊರತು ನಾನು ನಿಮ್ಮಿಂದ ಮತ್ತೇನನ್ನೂ ಅಪೇಕ್ಷಿಸುತ್ತಿರಲಿಲ್ಲ.''

ಮಾತು ತಿರುಗಿಸುವ ಉದ್ದೇಶದಿಂದ ರಮಾನಂದ್ ಹೇಳಿದನು: "ಇಂತಹ ಬಹು ಮೂಲ್ಯದ ಹಾರವನ್ನು ಸುರಕ್ಷಿತವಾಗಿಡುವುದೆಂದರೆ ದೊಡ್ಡ ಜವಾಬ್ದಾರಿ.''

"ನಾನದನ್ನು ಬಲ್ಲೆ ರಮಾನಂದ ರಾಯರೆ, ಬಹಳ ದೊಡ್ಡ ಜವಾಬ್ದಾರಿ. ಬ್ಯಾಂಕುಗಳಿಗಿಂತ ನಂಬಿಕಸ್ಥರಾದ ಸ್ನೇಹಿತರು ಆ ಜವಾಬ್ದಾರಿಯನ್ನು ಚೆನ್ನಾಗಿ ನಿರ್ವಹಿಸಬಲ್ಲರೆಂಬ ವಿಶ್ವಾಸದಿಂದ ನಾನು ನಿಮ್ಮಲ್ಲಿಗೆ ಬಂದಿದ್ದೇನೆ.''

"ನಿಮ್ಮ ಸರಾಫ್ ಮಿತ್ರರಲ್ಲೇ ಬಿಟ್ಟಿರಬಾರದೆ?''

"ನಾನು ಮೊದಲು ಹಾಗೆಯೇ ಯೋಚಿಸಿದ್ದೆ. ಆದರೆ ಒಂದು ಅಪಾಯವಿದೆ. ನಿಜವಾದ ಹಾರ ನನ್ನಲ್ಲಿಲ್ಲವೆಂದು ಆ ಸಿಂಧೀ ದರೋಡೆ ಕೋರರಿಗೆ ಏನಾದರೂ ಸಂದೇಹವಾಯಿತೋ ಅವರ ಮೊದಲ ದೃಷ್ಟಿ ನನ್ನ ಆ ಸರಾಫ್ ಮಿತ್ರನ ಮೇಲೇ ಬೀಳುವುದು. ಹಾರವನ್ನು ಅವನಲ್ಲಿಡುವುದರಿಂದ ಅವನನ್ನು ಅಪಾಯಕ್ಕೆ ಸಿಕ್ಕಿಸಿದಂತಾಗುತ್ತದೆ. ಹಾರವೂ ಉಳಿಯುವುದಿಲ್ಲ.''

"ನಾನು ಆ ಅಪಾಯವನ್ನು ಎದುರಿಸಬೇಕೆಂದೇ ನಿಮ್ಮ ಅಭಿಪ್ರಾಯ?''

"ನಿಮ್ಮ ವಿಚಾರ ಹಾಗಲ್ಲ. ಮೊದಲನೆಯದಾಗಿ ಅವರಿಗೆ ನಿಮ್ಮ ಮೇಲೆ ಸಂದೇಹ ಹುಟ್ಟುವುದಿಲ್ಲ. ಎರಡನೆಯದಾಗಿ ವಕೀಲರು, ದೊಡ್ಡ ಮನುಷ್ಯರು

ಎಂದರೆ ಅವರು ಸಹಜವಾಗಿ ಹೆದರುತ್ತಾರೆ. ಮುಸ್ಲಿಂ ಗೂಂಡಾಗಳ ಅನುಭವ ನನಗೆ ಚನ್ನಾಗಿದೆ. ನಿಸ್ಸಹಾಯಕರು ದುರ್ಬಲರು ಎಂದು ತಿಳಿದರೇ ಅವರು ಜನರ ಮೇಲೆ ಬೀಳುವುದು. ಬಲ, ಅಧಿಕಾರ, ಬುದ್ಧಿ, ಚತುರತೆಗಳನ್ನು ಕಂಡರೆ ಕುರಿಗಳಂತೆ ಪಲಾಯನ ಮಾಡುತ್ತಾರೆ. ನಿಮ್ಮ ಹತ್ತಿರ ಹಾರವಿದೆಯೆಂದು ತಿಳಿದರೂ ಅವರು ನಿಮ್ಮ ಗೋಜಿಗೆ ಬರುವುದಿಲ್ಲ."

"ನನಗೆ ಈ ವ್ಯವಹಾರ ಅಷ್ಟು ಚೆನ್ನಾಗಿ ಕಾಣುತ್ತಿಲ್ಲ"—ರಮಾನಂದ್ ಯೋಚಿಸಿ ಹೇಳಿದನು.

"ನೀವು ಈ ಜವಾಬ್ದಾರಿ ವಹಿಸಲು ನಿರಾಕರಿಸಿದರೆ ನನ್ನ ಭಾಗಕ್ಕೆ ಈ ಅಮೂಲ್ಯ ಹಾರ ನಷ್ಟವಾದಂತೆಯೇ. ಅದನ್ನು ರಕ್ಷಿಸಿಕೊಳ್ಳುವ ಚೈತನ್ಯ ಈಗ ನನ್ನಲಿಲ್ಲ. ನನ್ನ ಮಗಳು ಚಂದ್ರಲೇಖಾ, ಅವಳಿಗಾಗಿಯಾದರೂ ನೀವು ಈ ಜವಾಬ್ದಾರಿಯನ್ನು ನಿರ್ವಹಿಸಲು ಒಪ್ಪಬೇಕು. ಪ್ರಾಯಶಃ ವಿಭಜನಾನಂತರ ಕರಾಚಿಯ ನನ್ನ ಸಂಪತ್ತಿನಲ್ಲಿ ಉಳಿಯುವುದು ಈ ರತ್ನಹಾರ ಮಾತ್ರವೇ ಎಂದು ನನ್ನ ಅಂತರ್ವಾಣಿ ಹೇಳುತ್ತಿದೆ."

ಮಾತಾಡುತ್ತಿದ್ದಂತೆ ಕಿಷನ್‌ಚಂದನ ಕಣ್ಣುಗಳಲ್ಲಿ ಎರಡು ತೊಟ್ಟು ಕಂಬನಿ ಉರುಳಿತು. ಕಂಠ ಗದ್ಗದಿತವಾಯಿತು.

ರಮಾನಂದ್ ಪ್ರಮೀಳೆಯ ಮುಖ ನೋಡಿದನು. ಪ್ರಮೀಳಾ ಸಮ್ಮತಿ ಸೂಚಕವಾಗಿ ತಲೆಯಾಡಿಸಿದಳು. "ನಿಮ್ಮ ಮಗಳ ಸಲುವಾಗಿ ನಾನು ಈ ಜವಾಬ್ದಾರಿ ನಿರ್ವಹಿಸಲು ಒಪ್ಪುತ್ತೇನೆ" ಎಂದು ರಮಾನಂದ್ ಹೇಳಿದನು.

ಕಿಷನ್‌ಚಂದ್ ಸ್ವಲ್ಪ ಮಟ್ಟಿಗೆ ಸ್ಥಿರನಾಗಿ "ಈಗ ಮನಸ್ಸಿಗೆ ನೆಮ್ಮದಿಯಾಯಿತು. ಈ ಕೆಲಸಕ್ಕಾಗಿ ನನ್ನ ಸಂಭಾವನೆ ತೆಗೆದುಕೊಳ್ಳಿ" ಎಂದು ಜೇಬಿಂದ ಚಕ್ ಪುಸ್ತಕ ಹೊರಗೆ ತೆಗೆದನು.

ಕಿಷನ್‌ಚಂದನ ಕೈಹಿಡಿದು ರಮಾನಂದ್ ಹೇಳಿದನು : "ನಿಮ್ಮ ಸ್ನೇಹಕ್ಕಾಗಿ ನಾನು ಈ ಕೆಲಸ ಮಾಡುತ್ತೇನೆ. ಅದಕ್ಕಾಗಿ ಯಾವ ಪ್ರತಿಫಲವನ್ನೂ ಅಪೇಕ್ಷಿಸುವುದಿಲ್ಲ."

"ನಾನು ನಿಮಗೆ ಹೆಚ್ಚೇನೂ ಕೊಡುತ್ತಿಲ್ಲ. ಬ್ಯಾಂಕ್ ವ್ಯವಹಾರದಂತೆ ಶೇಕಡ ಎರಡರಂತೆ ಲೆಕ್ಕ ಹಾಕಿದರೂ ಹತ್ತು ಸಾವಿರ ರೂಪಾಯಿ ಆಗುತ್ತದೆ. ಅನಿರೀಕ್ಷಿತವಾಗಿ ಬರಬಹುದಾದ ಕರ್ಚುಗಳಿಗೆ ಹತ್ತು ಸಾವಿರ. ಒಟ್ಟು ಇಪ್ಪತ್ತು ಸಾವಿರಕ್ಕೆ ಚೆಕ್ ಕೊಡುತ್ತೇನೆ" ಎಂದು ಅದರಂತೆ ಚೆಕ್ ಬರೆದುಕೊಟ್ಟನು.

ಅನಂತರ ಆಭರಣಗಳನ್ನು ಹಿಂದಿರುಗಿ ಕೊಡುವ ವಿಚಾರ ಮಾತುಕತೆ ನಡೆಯಿತು. "ನಾನು ಅಥವಾ ನನ್ನ ಮಗಳು ಚಂದ್ರಲೇಖಾ ನಮ್ಮಿಬ್ಬರ ಕೈಗೆ ಮಾತ್ರವೇ ನೀವು ರತ್ನಹಾರ ಹಿಂದಕ್ಕೆ ಕೊಡಬೇಕು. ಕರಾಚಿಯಲ್ಲಿ ನಮ್ಮ ವ್ಯವಹಾರಗಳನ್ನು ಮುಗಿಸಿಕೊಂಡು ನಾವು ಕೆಲವು ತಿಂಗಳುಗಳಲ್ಲೇ ಹಿಂದಿರುಗುತ್ತೇವೆ. ಒಂದು ವೇಳೆ ನಾವು ಬರುವುದು ತಡವಾಗಿ ಮೂರನೆಯವರನ್ನು ಕಳುಹಿಸಿದರೆ ಗುರುತು ಹಿಡಿಯಲು ಏನಾದರೊಂದು ಸಂಕೇತವನ್ನು ಗೊತ್ತುಮಾಡಬೇಕು" ಎಂದು ಕಿಷನ್‌ಚಂದ್ ಹೇಳಿದನು.

ರಮಾನಂದ್ ಸ್ವಲ್ಪ ಹೊತ್ತು ಯೋಚಿಸಿ ಮೇಜನ್ನು ತೆರೆದು ಕೆಂಪು ರೇಷಿಮೆ ಬಟ್ಟೆಯ ಸಣ್ಣ ಡಬ್ಬಿಯೊಂದನ್ನು ತೆಗೆದು ಕಿಷನ್‌ಚಂದನಿಗೆ ಕೊಟ್ಟು "ನಿಮ್ಮ ಪ್ರತಿನಿಧಿಗೆ ಇದನ್ನು ಅಂಗಿಯ ಮೇಲೆ ಚುಚ್ಚಿಕೊಳ್ಳುವಂತೆ ಹೇಳಿ" ಎಂದನು.

ಡಬ್ಬಿಯಲ್ಲಿ ಗುಂಡಿಯಂತಿದ್ದ ಒಂದು ಸಣ್ಣ ಬೊಟ್ಟು. ಚಿನ್ನದಿಂದ ಮಾಡಿದ ಕಮಲಕ್ಕೆ ತ್ರಿಶೂಲ ಜೋಡಿಸಿತ್ತು. ಬೊಂಬಾಯ್ ಅಧಿಪತ್ಯದ ಕೆಲವು ಕಡೆ ಪ್ರಚಾರದಲ್ಲಿದ್ದ "ಶಕ್ತಿ ಸಂಘ"ದ ಸದಸ್ಯರು ಹಾಕಿಕೊಳ್ಳುವ ಸದಸ್ಯತ್ವದ ಸಂಕೇತ.

ರಮಾನಂದ್ ಹೇಳಿದನು. "ಇದನ್ನು ನೀವು ಹತ್ತಿರಿಟ್ಟುಕೊಂಡಿದ್ದರೆ ಯಾರೂ ಸಂದೇಹ ಪಡುವುದಿಲ್ಲ. ನೀವು ಬರಲಾಗದೆ ಹೋದರೆ ನಿಮ್ಮ ಮಗಳು ಅಥವಾ ಪ್ರತಿನಿಧಿಯ ಸಂಗಡ ಇದನ್ನು ಕಳುಹಿಸಿ. ಖಚಿತ ಮಾಡಿಕೊಳ್ಳಲು ಗುಂಡಿಯ ಹಿಂದೆ ಗುರುತು ಮಾಡುತ್ತೇನೆ."

ಎಂದು ರಮಾನಂದ್ ಮೇಜಿನ ಮೇಲಿದ್ದ ಕಾಗದದ ಚೂರಿಯಿಂದ ಗುಂಡಿಯ ಹಿಂಭಾಗದಲ್ಲಿ ಗುರುತು ಮಾಡಿದನು.

ಕಿಷನ್‌ಚಂದ್ ಅದನ್ನು ತೆಗೆದಿಟ್ಟುಕೊಂಡು " ನನ್ನ ಮಗಳು ಚಂದ್ರಲೇಖೆ ಯನ್ನು ಎರಡು ವರ್ಷಗಳ ಹಿಂದೆ ನೀವು ನೋಡಿದ್ದೀರಿ. ಆವರೂ ಗುರುತು ಹಿಡಿಯಲು ಸುಲಭವಾಗುವಂತೆ ಒಂದು ಫೋಟೋ ಕೊಟ್ಟಿರುತ್ತೇನೆ." ಎಂದು ಭಾವ ಚಿತ್ರವೊಂದನ್ನು ರಮಾನಂದನ ಮುಂದಿಟ್ಟನು.

ಸುಮಾರು ೨೦ ವರ್ಷ ವಯಸ್ಸಿನ ಸುಂದರ ಯುವತಿಯೊಬ್ಬಳ ಭಾವ ಚಿತ್ರ. ಸಿಂಧಿಗಳಂತೆ ರೇಷಿಮೆ ಪಾಯ್ಜಾಮಾ ಮತ್ತು ನಿಲುವಂಗಿ ತೊಟ್ಟು ವಲ್ಲಿಯೊಂದನ್ನು ಭುಜದ ಮೇಲೆ ಹಾಕಿಕೊಂಡಿದ್ದಳು. ಅಗಲವಾದ ಕಮಲ ಸದೃಶವಾದ ಕಣ್ಣುಗಳು, ತಿದ್ದಿದ ಹುಬ್ಬು, ಎಸಳಾದ ಮೂಗು, ತುಂಬು ತುಟಿಗಳು. ಚಿತ್ರದಲ್ಲಿಯೂ ಅಸಮಾನ ರೂಪವತಿಯೆಂಬುದು ಎದ್ದು ಕಾಣುತ್ತಿತ್ತು.

" ಎಂತಹ ಸುಂದರ ಕನ್ಯೆ !"—ಪ್ರಮೀಳಾ ಅಚ್ಚರಿಯಿಂದ ನುಡಿದಳು.

" ಚಂದ್ರಲೇಖಾ ಬಂದರೆ ನೀವು ಯಾವ ಗುರುತೂ ಕೇಳದೆ ರತ್ನಹಾರ ಕೊಡತಕ್ಕದ್ದು."

" ಪರಿಚಯದಲ್ಲಿ ಏನಾದರೂ ಸಂದೇಹ ಹುಟ್ಟಿದರೆ ?"—ರಮಾನಂದ್ ಪ್ರಶ್ನಿಸಿದನು.

" ಅದನ್ನು ನಿಮ್ಮ ವಿವೇಚನೆಗೆ ಬಿಟ್ಟಿದ್ದೇನೆ. ಅಂತಹ ಸಂದರ್ಭದಲ್ಲಿ ಪರಿಚಯ ಸ್ಥಿರಪಡಿಸಿಕೊಂಡು ಆ ಮೇಲೆ ಹಾರ ಕೊಡಿ "

" ನೀವು ಎಲ್ಲ ವಿಚಾರಗಳನ್ನು ನನಗೆ ಬಿಡಿ. ನಿಮ್ಮ ಮಗಳು ತಿಳಿದು ಕೊಳ್ಳಲಿ—ಬೊಂಬಾಯಲ್ಲಿ ನಾನು ಮತ್ತು ಪ್ರಮೀಳಾ ಅವಳ ಆತ್ಮೀಯರು ಎಂದು."

ಅನಂತರ ಕಿಷನ್‌ಚಂದ್ ರತ್ನಹಾರವನ್ನು ರಮಾನಂದನಿಗೆ ಕೊಟ್ಟು ಪ್ರತಿಯಾಗಿ ಯಾವ ದಾಖಲೆಯನ್ನೂ ಅಪೇಕ್ಷಿಸದೆ ಹೊರಟು ಹೋದನು.

ಈ ಘಟನೆ ನಡೆದ ಐದಾರು ತಿಂಗಳಿಗೆ ಭಾರತ ವಿಭಜನೆಯಾಯಿತು. ಆಗ ಪಂಜಾಬ್ ಮತ್ತು ಸಿಂಧ್ ಪ್ರಾಂತಗಳಲ್ಲಿ ನಡೆದ ಗಲಭೆಗಳು, ಉಭಯ

ರಾಷ್ಟ್ರಗಳಿಂದ ಅಲ್ಪ ಸಂಖ್ಯಾತರ ಒಲಸೆ, ಶರಣಾರ್ಥಿ ತಂಡಗಳ ಮೇಲೆ ಗೂಂಡಾಗಳ ಅತ್ಯಾಚಾರ ಇತ್ಯಾದಿ ವಿಷಾದ ಘಟನೆಗಳನ್ನು ವಾಚಕರು ಪತ್ರಿಕೆಗಳಲ್ಲಿ ಓದಿದ್ದಾರೆ. ಅವುಗಳ ವಿವರಣೆ ಈ ಕಾದಂಬರಿಯ ಉದ್ದೇಶವಲ್ಲ. ಆ ಘಟನೆಗಳ ಪರಿಣಾಮವಾಗಿ ಕೆಲವು ತಿಂಗಳವರೆಗೆ ಕಿಷನ್‌ಚಂದ್ ಅಥವಾ ಅವನ ಮಗಳ ವಿಚಾರ ರಮಾನಂದನಿಗೆ ತಿಳಿಯಲಿಲ್ಲ. ತಿಳಿಯಲು ಅವನು ಮಾಡಿದ ಪ್ರಯತ್ನಗಳು ವಿಫಲವಾದವು. ಆ ಮೇಲೆ ಮೊದಲನೆಯ ಪರಿಚ್ಛೇದದಲ್ಲಿ ವಿವರಿಸಿರುವಂತೆ ಆ ನತದೃಷ್ಟ ತಂದೆ ಮಗಳ ವಾರ್ತೆ ರಮಾನಂದನ ಕಛೇರಿಗೆ ತಲಪಿತು.



## ಮೂರನೆಯ ಪರಿಚ್ಛೇದ

ಆ ದಿನ ಸಂಜೆ ರಮಾನಂದ್ ಪೂನಾದಿಂದ ಹಿಂದಿರುಗುತ್ತಲೆ ಪ್ರಮೀಳಾ ಎಲ್ಲ ಸಮಾಚಾರವನ್ನು ತಿಳಿಸಿ ಗುಲಾಬ್‌ಸಿಂಗನು ಬರೆದ ಕಾಗದವನ್ನು ಕೊಟ್ಟಳು. ರಮಾನಂದ್ ಎಲ್ಲವನ್ನೂ ಕೇಳಿ "ಇದರಲ್ಲೇನೋ ರಹಸ್ಯವಿರುವಂತೆ ಕಾಣುತ್ತದೆ. ಹತ್ತು ಲಕ್ಷ ರೂಪಾಯಿ ಬಾಳುವ ರತ್ನಹಾರಕ್ಕಾಗಿ ಜನ ಏನು ಮಾಡಲೂ ಸಿದ್ಧರಾಗುತ್ತಾರೆ. ಪಾಕಿಸ್ಥಾನದಲ್ಲಿ ಅಂತಹವರ ಸಂಖ್ಯೆ ಹೆಚ್ಚುತ್ತಿದೆ. ನಾಳೆ ಪ್ರಾತಃಕಾಲ ಬರುವಂತೆ ಕಾಮೇಶ್ ಚೌದುರಿಗೆ ಹೇಳಿ ಕಳುಹಿಸು. ಅವನ ಸಂಗಡ ಆಲೋಚನೆ ಮಾಡೋಣ" ಎಂದನು.

ಅದರಂತೆ ಪ್ರಮೀಳಾ ಒಂದು ಕಾಗದ ಬರೆದು ಸೇವಕನಿಗೆ ಕೊಟ್ಟು ಆ ರಾತ್ರಿಯೇ ತಲಪಿಸುವಂತೆ ಹೇಳಿದಳು. ಮರುದಿನ ಪ್ರಾತಃಕಾಲ ಕಾಮೇಶ ಚೌದುರಿ ಕಛೇರಿಗೆ ಬಂದಾಗ ರಮಾನಂದ್ ಪ್ರಮೀಳಾ ಅವನಿಗಾಗಿ ಕಾದಿದ್ದರು.

“ಏನು ಸಮಾಚಾರ?”—ಕಾಮೇಶ್ ಕೇಳಿದ.

“ಸುಪ್ರಸಿದ್ಧ ಪತ್ತೇದಾರ ಕಾಮೇಶ್ ಚೌದುರಿ ಮಹಾಶಯರ ಕೌಶಲದೆದುರಿನಲ್ಲಿ ಇದೊಂದು ಸಾಮಾನ್ಯ ವಿಚಾರ. ಕೊಲೆಯಲ್ಲ, ದರೋಡೆಯಲ್ಲ. ಆಸಾಮಿ ಪರಿಚಯ ನಿಜವೇ ಮೋಸವೇ ಎಂಬುದನ್ನು ಪತ್ತೆಮಾಡಬೇಕಾಗಿದೆ.”

ನಗುತ್ತ ರಮಾನಂದ್ ಉತ್ತರ ಕೊಟ್ಟನು.

“ಅದೇನು ಸಾಮಾನ್ಯವಾದ ಕೆಲಸವೇ ಬ್ಯಾರಿಸ್ಟರ್ ಮಹಾಶಯರೆ? ಪಾಕಿಸ್ಥಾನದಿಂದ ಬರುವ ಶರಣಾರ್ಥಿಗಳ ಸಂಖ್ಯೆ ಬೊಂಬಾಯಲ್ಲಿ ದಿನ ದಿನಕ್ಕೆ ಬೆಳೆಯುತ್ತಿರುವಾಗ ಯಾರ ಪರಿಚಯ ನಿಜ, ಯಾರ ಪರಿಚಯ ಮೋಸ ಎಂಬುದನ್ನು ತಿಳಿಯಲು ಪತ್ತೆದಾರಿ ಕೌಶಲ ಅಗತ್ಯ.”

“ಶರಣಾರ್ಥಿಗಳಿಗೆ ಸಂಬಂಧಿಸಿದ ವಿಚಾರಕ್ಕಾಗಿಯೇ ನಿನ್ನನ್ನು ಕರೆಸಿರುವುದಾಗಿ ಹೇಗೆ ತಿಳಿದುಕೊಂಡೆ? ಪ್ರಮೀಳಾ ಕಾಗದದಲ್ಲಿ ಬರೆದಿದ್ದಳೆ?”

“ಕರಾಚಿಯ ಕೋಟೇಶ್ವರ ಕಿಷನ್‌ಚಂದನು ನಿಮ್ಮ ಕಕ್ಷಿಗಾರನೆಂಬುದನ್ನು ನಾನು ಮರೆತಿಲ್ಲ. ಆ ಸಂಬಂಧದಲ್ಲಿಯೇ ಏನೋ ಇರಬೇಕೆಂದು ಯೋಚಿಸಿದೆ.”

“ನಿನ್ನ ಊಹಾಶಕ್ತಿ ಅಮೋಘವಾದದ್ದು. ನೀನು ಪತ್ತೇದಾರನಲ್ಲದಿದ್ದರೆ ಬೊಂಬಾಯ್ ಸರ್ಕಾರದ ಅರ್ಥ ಮಂತ್ರಿ ಪದವಿಗೆ ಅರ್ಹನಾಗುತ್ತಿದ್ದೆ.”

“ಅರ್ಥ ಮಂತ್ರಿಗೆ ಊಹಾಶಕ್ತಿಯ ಅಗತ್ಯವಿಲ್ಲ. ಕಾರ್ಯದರ್ಶಿಗಳು ಸಂಗ್ರಹಿಸಿ ಮುಂದಿಡುವ ಸಂಖ್ಯೆಗಳನ್ನು ಚತುರನಾದ ಚದುರಂಗದ ಆಟಗಾರನಂತೆ ಸಮಯೋಚಿತವಾಗಿ ಸ್ಥಳದಿಂದ ಸ್ಥಳಕ್ಕೆ ಬದಲಾಯಿಸುವುದು ಅವನ ಕೆಲಸ. ಆಡಳಿತ ತಂತ್ರದಲ್ಲಿ ಇದಕ್ಕೆ ದೊಡ್ಡದೊಂದು ಹೆಸರಿದೆ Budget Preparing ಎಂದು. ವರ್ಷದಲ್ಲಿ ಆರು ತಿಂಗಳಕಾಲ ಅರ್ಥ ಸಚಿವರ ಕೆಲಸ ಬಜೆಟ್ ತಯಾರಿಸುವುದು, ಉಳಿದ ಆರು ತಿಂಗಳಕಾಲ ತಯಾರಿಸಿದ್ದನ್ನು ತಿದ್ದುವುದು. ಆ ಕೆಲಸಕ್ಕೆ ಲೆಕ್ಕ ಪಕ್ಕ ತಿಳಿದ ಮುನ್ಷಿಯಾದರೆ ಸಾಕು. ಪತ್ತೆದಾರನ ಅಗತ್ಯವಿಲ್ಲ.”

ಚೌದುರಿಯ ವಿಚಾರ ಈಗಲೆ ಒಂದು ಮಾತನ್ನು ವಾಚಕರಿಗೆ ತಿಳಿಸುವುದು ಒಳ್ಳೆಯದು. ವೃತ್ತಿಯಲ್ಲಿ ಪತ್ತೇದಾರನಾದರೂ ದಾರ್ಶನಿಕನಂತೆ

ವಿಶ್ವದ ಎಲ್ಲ ಆಗತ್ಯ ಅನಗತ್ಯ ವಿಷಯಗಳ ಮೇಲೂ ಹಾಸ್ಯದ ಚಟಾಕಿಗಳನ್ನು ಹಾರಿಸುವುದು ಚೌದುರಿಯ ಪದ್ಧತಿ. ಅನೇಕ ಸಂದರ್ಭಗಳಲ್ಲಿ ಚೌದುರಿ ಈ ಚಟವನ್ನು ತನ್ನ ನಿಜವಾದ ಯೋಚನಾ ತರಂಗಗಳನ್ನು ಶ್ರೋತೃಗಳಿಂದ ಮುಚ್ಚಿಡಲು ಉಪಯೋಗಿಸುವನು. ಹೊರಗೆ ಹಾಸ್ಯ ಚಟಾಕಿ ಹಾರಿದಂತೆಲ್ಲಾ ಒಳಗೆ ಅವನ ಬುದ್ಧಿಶಕ್ತಿ ದ್ವಿಗುಣ ವೇಗದಿಂದ ಹಾರುವುದೆಂಬುದು ರಮಾನಂದನಿಗೆ ತಿಳಿದಿತ್ತು. ಅವನು ಹೇಳಿದನು.

"ಸದ್ಯದಲ್ಲಿ ಅರ್ಥಶಾಸ್ತ್ರ ವಿಶಾರದನಿಗಿಂತ ಪತ್ತೆದಾರನ ಅಗತ್ಯ ನನಗೆ ಹೆಚ್ಚಿಗಿದೆ. ಕಿಷನ್‌ಚಂದನ ತೊಡಕನ್ನು ಬಿಡಿಸುವ ಕಾರ್ಯದಲ್ಲಿ ನಿನ್ನ ಬುದ್ಧಿ ಕುಶಲತೆಯ ಪರೀಕ್ಷೆ ನಡೆಯಬೇಕಾಗಿದೆ."

"ಈಗ ನನಗೆ ನೆನಪಾಯಿತು. ಷಿಕಾರ್‌ಪುರದ ಗಲಭೆಯಲ್ಲಿ ಕಿಷನ್ ಚಂದನ ಪ್ರಾಣಾಂತವಾಯಿತೆಂದು ಯಾವುದೋ ಪತ್ರಿಕೆಯಲ್ಲಿ ಓದಿದ್ದೆ. ಈಗ ಅವನ ಮಗಳೆಲ್ಲಿದ್ದಾಳೆ? ಕಿಷನ್‌ಚಂದನ ವಕೀಲನಾದ ನಿನಗೆ ಅವರ ವಿಚಾರ ಚೆನ್ನಾಗಿ ತಿಳಿದಿರಬೇಕು."

"ಈ ದಿನವೇ ನಾನು ಅವರ ವಿಚಾರ ಕೇಳಿದ್ದು. ಮಗಳು ಡಿಲ್ಲಿಗೆ ಬಂದಿದ್ದಾಳೆ" ಎಂದು ಪ್ರಾರಂಭ ಮಾಡಿ ರಮಾನಂದ್ ತಾನು ನಗರದಲ್ಲಿಲ್ಲದಿದ್ದಾಗ ಚಂದ್ರಲೇಖಾ ಫೋನ್ ಮಾಡಿದ್ದು, ಅವಳ ಪ್ರತಿನಿಧಿಯಾಗಿ ಬೊಂಬಾಯಿಗೆ ಗುಲಾಬ್‌ಸಿಂಗನ ಆಗಮನ, ಪ್ರಮೀಳೆಗೆ ಅವನು ಬರೆದ ಕಾಗದ ಮುಂತಾಗಿ ಎಲ್ಲಾ ವಿಚಾರಗಳನ್ನೂ ಚೌದುರಿಗೆ ತಿಳಿಸಿದನು. ಮಧ್ಯೆ ಮಧ್ಯೆ ಚೌದುರಿ ಪ್ರಮೀಳೆಯನ್ನು ಪ್ರಶ್ನಿಸಿ ತನಗೆ ಬೇಕಾದ ವಿವರಗಳನ್ನು ತಿಳಿದುಕೊಂಡನು. ಕೊನೆಗೆ "ಈಗೇನು ಮಾಡಬೇಕೆಂದು ನಿಮ್ಮ ಸಲಹೆ?" ಎಂದು ರಮಾನಂದನನ್ನು ಕೇಳಿದನು.

"ಒಳ್ಳೇ ಪತ್ತೇದಾರನಯ್ಯ ನೀನು! ನಿನ್ನನ್ನು ಸಲಹೆಗಾಗಿ ಕರೆದರೆ ನನ್ನನ್ನೇ ಕೇಳುವೆಯಲ್ಲಾ."

"ನನ್ನ ಸಲಹೆ ನಿಮ್ಮ ನಿರ್ಧಾರವನ್ನು ಅವಲಂಬಿಸುತ್ತದೆ. ಕಿಷನ್ ಚಂದನ ಅಥವಾ ಅವನ ಮಗಳ ಹೆಸರು ಹೇಳಿಕೊಂಡು ಮೊದಲು ಯಾರು

ಬರುವರೋ ಅವರಿಗೆ ರತ್ನಹಾರ ಕೊಡುವುದು ನಿನ್ನ ಇಷ್ಟವಾದರೆ ನನ್ನ ಸಲಹೆ ಅಗತ್ಯವಿರುವುದಿಲ್ಲ."

"ಹಾಗಾದರೆ ಈಗ ಬಂದಿರುವ ಗುಲಾಬ್‌ಸಿಂಗ್ ನಿಜವಾದ ವ್ಯಕ್ತಿಯಲ್ಲ ವೆಂದೇ ನಿನ್ನ ಅಭಿಪ್ರಾಯ."

"ಅವನ ವರ್ತನೆಯೇ ಅದನ್ನು ವ್ಯಕ್ತಪಡಿಸುತ್ತದೆ. ನಿಜವಾದ ಗುಲಾಬ್‌ಸಿಂಗ್ ಆಗಿದ್ದರೆ ನೀನು ಪೂನಾದಿಂದ ಹಿಂದಿರುಗುವವರೆಗೆ ಸುಮ್ಮನಿದ್ದು ಅನಂತರ ನಿನ್ನನ್ನು ನೋಡುತ್ತಿದ್ದ. ನಿನ್ನ ಪರೋಕ್ಷ ನಿನ್ನ ಸೆಕ್ರಿಟರಿ ಸಂಗಡ ವ್ಯವಹಾರ ನಡೆಸಲು ಪ್ರಯತ್ನಿಸುತ್ತಿರಲಿಲ್ಲ."

"ಚಂದ್ರಲೇಖಾ ಇದ್ದಕ್ಕಿದ್ದಂತೆ ಅವನನ್ನು ಮದುವೆಯಾಗಲೆಳಸಿರುವುದು. ನನಗೇಕೊ ವಿಚಿತ್ರವಾಗಿ ಕಾಣುತ್ತದೆ"—ಪ್ರಮೀಳಾ ಹೇಳಿದಳು.

"ಆ ವಿಚಾರದಲ್ಲಿ ಸಂದೇಹಕ್ಕೆಡೆಯಿಲ್ಲ."—ರಮಾನಂದ್ ನುಡಿದನು. "ಕಿಷನ್‌ಚಂದನೇ ಒಂದೆರಡು ನಾರಿ ಗುಲಾಬ್‌ಸಿಂಗನ ಹೆಸರು ಹೇಳಿದ್ದಾನೆ. ಮಗಳನ್ನು ಅವನಿಗೆ ಕೊಟ್ಟು ಮದುವೆ ಮಾಡಲು ಈಗೆರಡು ವರ್ಷಗಳ ಹಿಂದೆಯೇ ಕಿಷನ್‌ಚಂದ್ ಯೋಚಿಸಿದ್ದ. ಏನೋ ಕಾರಣದಿಂದ ಆಗ ಮದುವೆ ನಿಂತು ಹೋಯಿತು. ಆದರೆ ನಾನು ಯಾವಾಗಲೂ ಗುಲಾಬ್ ಸಿಂಗನನ್ನು ನೋಡಿಲ್ಲ. ಅದೇ ಬಂದಿರುವ ತೊಂದರೆ."

"ಅವನು ಬರೆದಿರುವ ವಿಳಾಸಕ್ಕೆ ನೀನೂ ಪ್ರಮೀಳಾ ಇಬ್ಬರೂ ಹೋಗಿ ನೋಡಿ ಬನ್ನಿ. ನಿಜವೇ ಮೋಸವೇ ಎಂಬುದು ತಾನಾಗಿ ವ್ಯಕ್ತವಾಗುವುದು."

"ಪತ್ತೆದಾರ ಮಹಾಶಯರೂ ಸಂಗಡ ಬಂದರೆ ಅದು ಸಾಧ್ಯ."

"ಬರುತ್ತೇನೆ. ಆದರೊಂದು ನಿಬಂಧನೆಯಿದೆ."

"ಏನು ನಿಬಂಧನೆ?"

"ಈ ಸಂಬಂಧದಲ್ಲಿ ನನಗೆ ಕೆಲವು ಪೂರ್ವಪಕ್ಷಗಳಿವೆ. ಅವುಗಳನ್ನು ಪರಿಶೋಧಿಸಿ ನಿಜಾಂಶವನ್ನು ಹೊರಗೆಡವಲು ನಾನು ಹೇಳಿದಂತೆ ನೀವು ನಡೆಯಬೇಕು."

" ಅದೇನಯ್ಯಾ ನಿನ್ನ ಪೂರ್ವ ಪಕ್ಷಗಳು ?"

ಕಾಮೇಶ್ ಬೆರಳು ಮಡಿಸಿ ಒಂದೊಂದಾಗಿ ತನ್ನ ಸಂದೇಹಗಳನ್ನು ವ್ಯಕ್ತಪಡಿಸಿದ: " ಮೊದಲನೆಯದಾಗಿ ಅವನು ನಿಜವಾದ ಗುಲಾಬಸಿಂಗನಲ್ಲ. ಯಾವನೋ ಮೋಸಗಾರ. ಎರಡನೆಯದಾಗಿ ಪಾಕಿಸ್ಥಾನಿಗಳ ಒಂದು ಪುಂಡ ಗುಂಪು ರತ್ನಹಾರವನ್ನು ಅಪಹರಿಸಲು ತಂತ್ರ ಹೂಡಿದೆ. ಡಿಲ್ಲಿಯಿಂದ ಪ್ರಮೀಳಾ ಸಂಗಡ ಮಾತಾಡಿದವಳು ಕಿಷನ್‌ಚಂದನ ಮಗಳೆಂದು ನಾನು ನಂಬುವುದಿಲ್ಲ. ಅವಳೂ ಆ ಪುಂಡರ ಗುಂಪಿಗೆ ಸೇರಿದವಳಾಗಿರಬೇಕು. ಮೂರನೆಯದಾಗಿ ಈ ಪಿತೂರಿ ಹೂಡಿರುವವರು ಯಾವ ಕೃತ್ಯಕ್ಕೂ ಹೇಸುವವರಲ್ಲ. ನಾವು ಆಯುಧಪಾಣಿಗಳಾಗಿ ಎಲ್ಲಕ್ಕೂ ಸಿದ್ಧರಾಗಿರಬೇಕು. ನಾಲ್ಕನೆಯದಾಗಿ—"

" ಮೂರಕ್ಕೆ ಮುಕ್ತಾಯವಾಗಲಿ ನಿನ್ನ ಪೂರ್ವಪಕ್ಷಗಳು ಕಾಮೇಶ್. ನಿಬಂಧನೆಯೇನು ಹೇಳು ?"

" ಕೋರ್ಟಿನ ರಜ ಯಾವಾಗ ಪ್ರಾರಂಭವಾಗುವುದು ?"

" ನನ್ನ ಪ್ರಶ್ನೆಗೆ ಅದು ಉತ್ತರವೇ ?"

" ನನ್ನ ನಿಬಂಧನೆ ಅದಕ್ಕೆ ನೀನು ಕೊಡುವ ಉತ್ತರವನ್ನವಲಂಬಿಸಿದೆ."

" ರಜಾ ಪ್ರಾರಂಭವಾಗಲು ಇನ್ನೊಂದು ವಾರವಿದೆ. ಆದರೆ ನನ್ನ ಕೆಲಸ ಗಳೆಲ್ಲವನ್ನೂ ಪೂನಾದಲ್ಲಿ ನಿನ್ನೆಯೇ ಮುಗಿಸಿಕೊಂಡಿದ್ದೇನೆ. ಇನ್ನೆರಡು ತಿಂಗಳು ಕೋರ್ಟಿನ ತೊಂದರೆಯೇ ಇಲ್ಲದೆ ಕಳೆಯಬೇಕೆಂದು ನನ್ನ ನಿರ್ಧಾರ."

" ಹಾಗಾದರೆ ಅನುಕೂಲವೇ ಆಯಿತು. ಪ್ರಯಾಣಕ್ಕೆ ಸಿದ್ಧನಾಗಿ ನನ್ನ ಸಂಗಡ ಬಾ. ನೀನು ಅಪೇಕ್ಷಿಸಿದರೆ ಪ್ರಮೀಳಾ ಕೂಡಾ ಸಂಗಡ ಬರಲಿ. ನಾಲ್ಕು ವಾರಗಳು ಎಲ್ಲಾದರೂ ತಿರುಗಾಡಿ ಬರೋಣ."

" ನಾವು ಗುಲಾಬ್‌ಸಿಂಗನನ್ನು ನೋಡಬೇಕಾದ್ದು ತಾರ್‌ದೇವಿಯಲ್ಲಿ. ಅಲ್ಲಿಂದ ಹಿಂದಿರುಗಿದ ಮೇಲೆ ಪ್ರಯಾಣದ ವಿವರಗಳನ್ನು ಗೊತ್ತುಮಾಡಿ ಕೊಳ್ಳೋಣ."

" ಈ ವ್ಯವಹಾರ ತಾರ್‌ದೇವಿಯಲ್ಲಿ ಮುಗಿಯುವುದಿಲ್ಲವೆಂದು ನನಗೆ ತಿಳಿದಿದೆ. ಅಲ್ಲಿಂದ ನಮ್ಮನ್ನು ಎಲ್ಲಿಗೆ ಎಳೆದುಕೊಂಡು ಹೋಗುವುದೋ ಕಿಷನ್‌ಚಂದರ ರತ್ನಹಾರ? ನಾವು ಗುಲಾಬ್‌ಸಿಂಗನನ್ನು ನೋಡುವುದಕ್ಕೆ ಹೊರಡಲು ಇನ್ನೊಂದು ಗಂಟೆಯಿದೆ. ಅಷ್ಟರಲ್ಲಿ ನಿನ್ನ ಸಿದ್ಧತೆಯೆಲ್ಲವೂ ಮುಗಿಯಬೇಕು."

ರಮಾನಂದ್ ಒಪ್ಪಿಕೊಂಡನು. ಮೂವರೂ ತಾರ್‌ದೇವಿಗೆ ಹೋಗ ತಕ್ಕದ್ದೆಂದು ಗೊತ್ತಾಯಿತು. ಚೌದುರಿ ಟ್ಯಾಕ್ಸಿಗೆ ಹೇಳಿ ಕಳುಹಿಸಿ ಪ್ರಮೀಳೆಯ ಕಡೆ ತಿರುಗಿ " ನೀನೂ ಪ್ರಯಾಣಕ್ಕೆ ಸಿದ್ಧಳಾಗಬೇಕು " ಎಂದನು.

" ನೀವು ಸಿದ್ಧರಾದರೆ ನಾನೂ ಸಿದ್ಧ."

" ಅಷ್ಟಕ್ಕೆ ಮುಗಿಯುವುದಿಲ್ಲ ನಿನ್ನ ಸಿದ್ಧತೆ. ಪೌಡರ್, ಲಿಪ್‌ಸ್ಟಿಕ್, ಬಾಚಣಿಗೆಗಳ ವ್ಯವಹಾರಗಳಿಗೆ ಒಂದು ಗಂಟೆಯಾದರೂ ಬೇಕಾಗುವುದು."

ರಮಾನಂದ್ ಮಧ್ಯೆ ಬಾಯಿ ಹಾಕಿ—" ಪ್ರಮೀಳಾ, ನೀನು ಹೇಗಿದ್ದರೂ ಕಾಮೇಶನ ಕಣ್ಣುಗಳಿಗೆ ರಂಭೆಯಂತೆ ಕಾಣುವೆ."

ಪ್ರಮೀಳಾ ಉತ್ತರ ಕೊಡಲಿಲ್ಲ. ಹ್ಯಾಂಡ್ ಬ್ಯಾಗ್ ತೆಗೆದುಕೊಂಡು ಕಛೇರಿಯ ಒಳಕೊಟಡಿಗೆ ಹೋದಳು. ಕಾಮೇಶ್ ಗಡಿಯಾರ ನೋಡಿಕೊಂಡು " ಈಗ ಹತ್ತು ಗಂಟೆ ಐದು ನಿಮಿಷ. ಹೋಟಲಿಂದ ತಿಂಡಿ ಬರಬೇಕಾದರೆ ಇನ್ನು ಹತ್ತು ನಿಮಿಷಗಳಾಗುವವು. ಅಷ್ಟರಲ್ಲಿ ನಿನ್ನ ಅಲಂಕಾರ ಮುಗಿಯದೆ ಹೋದರೆ ಸೂತ್ರಧಾರನು ನಟಿಯಿಲ್ಲದೆ ನಾಟಕಾರಂಭ ಮಾಡಬೇಕಾಗುವುದು " ಎಂದು ಪ್ರಮೀಳೆಗೆ ಎಚ್ಚರಿಕೆ ಕೊಟ್ಟನು.

ಪ್ರಮೀಳೆಯನ್ನು ರಮಾನಂದನ ಕಛೇರಿಗೆ ಕೆಲಸಕ್ಕೆ ಸೇರಿಸಿದವನು ಚೌದುರಿಯೇ ಎಂದು ಜನ ಹೇಳುತ್ತಿದ್ದರು. ಅದಕ್ಕೆ ಮೊದಲು ಪ್ರಮೀಳಾ ಚೌದುರಿಯ ಆಶ್ರಯದಲ್ಲಿದ್ದಳೆಂದೂ ಒಂದು ಬಗೆಯ ಪ್ರವಾದವೋ ಅಪ ವಾದವೋ ಪ್ರಚಾರದಲ್ಲಿತ್ತು. ಪ್ರಮೀಳಾ ಮತ್ತು ಚೌದುರಿಯ ಪ್ರೇಮ ವ್ಯವಹಾರ ರಮಾನಂದನ ಕಛೇರಿಯಲ್ಲಿ ಉಪಹಾಸದ ಮಾತು. ಮೂವರೂ ಸಂಧಿಸಿದಾಗಲೆಲ್ಲ ರಮಾನಂದ್ ಕೇಳುವನು—" ನಿಮ್ಮ ಮದುವೆ ಔತಣ

ಯಾವಾಗ ಕಾಮೇಶ್ ? ನನ್ನನ್ನು ಕರೆಯಲು ಮರೆಯುವುದಿಲ್ಲವಷ್ಟೇ ?" ಎಂದು. ಕಾಮೇಶ್ ಮಾತು ಹಾರಿಸಿ "ನಮ್ಮ ಮಗುವಿಗೆ ರಮಾನಂದ್ ಎಂತ ಹೆಸರಿಡುತ್ತೇನೆ. ಮದುವೆಗಲ್ಲದಿದ್ದರೂ ಮಗುವಿನ ನಾಮಕರಣಕ್ಕೆ ನಿನ್ನನ್ನು ಕರೆಯಲು ಖಂಡಿತ ಮರೆಯುವುದಿಲ್ಲ" ಎಂದು ಬಿಡುವನು.

ಪ್ರಮೀಳೆ ಒಳಗೆ ಹೋದ ಮೇಲೆ ರಮಾನಂದ್ ಕಛೇರಿಯಲ್ಲಿ ತನಗಾಗಿ ಪ್ರತ್ಯೇಕಿಸಲ್ಪಟ್ಟಿದ್ದ ಕೊಟಡಿಗೆ ಹೋಗಿ ಕಾಗದ ಪತ್ರಗಳನ್ನು ಸರಿಪಡಿಸುವುದರಲ್ಲಿ ತೊಡಗಿದನು. ಕಾಮೇಶ್ ಟೆಲಿಫೋನ್ ಡೈರೆಕ್ಟರಿಯನ್ನು ತೆಗೆದುಕೊಂಡು ತನಗೆ ಬೇಕಾಗಿದ್ದ ನಂಬರುಗಳನ್ನು ಹುಡುಕಿ ಫೋನಿನಲ್ಲಿ ಮಾತಾಡಲು ಪ್ರಾರಂಭಿಸಿದನು.

ಈ ರೀತಿ ಹತ್ತು ಹದಿನೈದು ನಿಮಿಷಗಳು ಕಳೆದ ಮೇಲೆ ಹೋಟಲಿಂದ ಮಾಣಿ ಚಹಾ ಮತ್ತು ತಿಂಡಿ ಸಾಮಾನುಗಳನ್ನು ತಂದಿಟ್ಟ.

ಮೂವರೂ ಫಲಾಹಾರಕ್ಕೆ ಕುಳಿತರು.



# ನಾಲ್ಕನೆಯ ಪರಿಚ್ಛೇದ

ಚೌಪಾತಿಯ ಹತ್ತಿರ ರಮಾನಂದನ ಕಛೇರಿಯಲ್ಲಿ ಅಲ್ಪಾಹಾ ಸಮಾರಾಧನೆ ನಡೆಯುತ್ತಿದ್ದಾಗ ತಾರ್‌ದೇವಿಯಲ್ಲಿ ಒಂದು ದೊಡ್ಡ ಮನೆ ನಾಲ್ಕನೆಯ ಅಂತಸ್ತಿನ ಕೊಟಡಿಯೊಂದರಲ್ಲಿ ಮಧ್ಯವಯಸ್ಸಿನ ಪುರುಷರಿಬ್ಬ ಆರಾಮ ಕುರ್ಚಿಯ ಮೇಲೆ ಕುಳಿತು ಧೂಮಪಾನ ಮಾಡುತ್ತ ಮಾತಾ ತ್ತಿದ್ದರು. ಅವರಲ್ಲೊಬ್ಬನು ಆಂಗ್ಲ ಪೋಷಾಕನ್ನು ಧರಿಸಿದ್ದ. ಮತ್ತೊಬ್ಬ ಪಾಯಜಾಮಾ, ಷರಟು ಕೋಟುಗಳನ್ನು ಹಾಕಿಕೊಂಡು ಸಿಂಧಿಯ ಕಾಣುತ್ತಿದ್ದ.

ಆಂಗ್ಲ ಉಡುಪು ಧರಿಸಿದ್ದ ವ್ಯಕ್ತಿ ಹೇಳುತ್ತಿದ್ದ: "ನಾನು ಆ ಹೆಂಗಸನ್ನ ನೋಡಿದ್ದೇನೆ. ರಮಾನಂದನ ವ್ಯವಹಾರ ರಹಸ್ಯಗಳೆಲ್ಲಾ ಅವಳಿಗೆ ತಿಳಿದಿದೆ. ಕಿಷನ್‌ಚಂದ್ ಅದೃಶ್ಯನಾಗುವ ಮೊದಲು ರತ್ನಹಾರವನ್ನು ಕರಾಚಿಗೆ ತೆಗೆದು ಕೊಂಡು ಹೋಗಿದ್ದರೆ ಅದವಳಿಗೆ ತಿಳಿದಿರಬೇಕು. ಫೋನಲ್ಲಿ ಏನು ಹೇಳಿದಳು?"

"ಟೆಲಿಫೋನಲ್ಲಿ ಹೆಚ್ಚಿಗೆ ಮಾತಾಡುವ ಅವಕಾಶವಾಗಲಿಲ್ಲ. ಪರಿಚಯ ಪತ್ರದ ಮಾತು ಬಂದಾಗ ಸಂಕೇತವ ವಿವರ ಹೇಳಿದೆ. ಆಗ ಹೋಟಲಿಗೆ ಬಂದು ನೋಡುವಂತೆ ಹೇಳಿದಳು. ಆ ಮೇಲೆ ಇಲ್ಲಿಗೆ ಬರುವಂತೆ ನಾನು ಪತ್ರ ಬರೆದದ್ದು"—ಸಿಂಧಿ ಉತ್ತರ ಕೊಟ್ಟ.

"ಅವಳು ಇಲ್ಲಿಗೆ ಬರುವುದೇ ನನಗೆ ಸಂದೇಹ. ಬಂದರೂ ಒಂಟಿಗಿತ್ತಿ ಯಾಗಿ ಬರುವುದಿಲ್ಲ. ನೀನು ಅವಳ ವಿಚಾರದಲ್ಲಿ ಬಹಳ ಎಚ್ಚರದಿಂದಿರಬೇಕು. ರಮಾನಂದ್ ಬೊಂಬಾಯಿಗೆ ಹಿಂದಿರುಗುವುದರೊಳಗಾಗಿ ರತ್ನಹಾರ ಎಲ್ಲಿದೆ ಯೆಂಬುದನ್ನು ತಿಳಿದುಕೊಳ್ಳಬೇಕು. ನಾನು ಹೇಳಿದಂತೆ ನೀನು ಎಲ್ಲವನ್ನು ಮಾಡು. ಮಧ್ಯಾಹ್ನ ನನ್ನನ್ನು ನೋಡಿ ಏನು ನಡೆಯಿತೆಂದು ವರದಿ ಮಾಡಬೇಕು."

ಎಂದು ಹೇಳಿ ಆಂಗ್ಲ ಉಡುಪಿನ ವ್ಯಕ್ತಿ ಹೊರಡಲು ಸಿದ್ಧನಾದ.

"ಪ್ರಮೀಳಾ ಒಬ್ಬಳೆ ಬಂದರೆ? ಅವಳು ಸುಂದರಿ ಮತ್ತು ಯುವತಿ ಎಂದು ಹೇಳುತ್ತೀರಿ. ಅಂತಹವರ ವಿಚಾರದಲ್ಲಿ ನನ್ನ ಪ್ರತಿಕ್ರಿಯೆ ನಿಮಗೆ ತಿಳಿದಿದೆ."

"ನಿನ್ನ ಮಂಗ ವ್ಯವಹಾರ ಇಲ್ಲಿ ಪ್ರಾರಂಭಿಸಬೇಡ. ಪ್ರಮೀಳಾ ವಿದ್ಯಾವತಿ. ಪಳಗಿದ ಪಾರಿವಾಳವಲ್ಲ ಕೈಚಾಚಿ ಹಿಡಿದುಕೊಳ್ಳುವುದಕ್ಕೆ. ಒಂದು ವೇಳೆ ಅವಳು ಒಬ್ಬಳೇ ಬಂದರೆ ಹೊರಗೆ ನಾಲ್ಕಾರು ಮಂದಿ ಪೋಲೀಸರೋ ಪತ್ತೆದಾರರೋ ಹೊಂಚು ಕಾಯುತ್ತಿರುವುದು ಖಂಡಿತ. ಅಂತಹ ಸಂದರ್ಭದಲ್ಲಿ ನೀನು ಮೈಯೆಲ್ಲ ಕಣ್ಣಾಗಿ ಹತ್ತುಪಾಲು ಎಚ್ಚರದಿಂದ ನಡೆದು ಕೊಳ್ಳಬೇಕು."

ಸಿಂಧಿ ನಗುತ್ತ ಉತ್ತರ ಕೊಟ್ಟ—" ನೀವು ಹೆದರಬೇಕಾಗಿಲ್ಲ ಸಾಹೇಬ್. ನಾನು ಮಿಲಟರಿಯಲ್ಲಿದ್ದಾಗ ನನ್ನನ್ನು ಗೆಳೆಯರು ಲೇಡಿ ಕಿಲ್ಲರ್ ಎಂದು ಕರೆಯುತ್ತಿದ್ದರು. ಸಿವಿಲಿಯನ್ ಉಡುಪಿನಲ್ಲಿದ್ದ ಮಾತ್ರಕ್ಕೆ ನನ್ನ ಆಕರ್ಷಣೆ ಕಡಿಮೆಯಾಗಿ ಬಿಡುತ್ತದೆಯೇ ?"

" ನಿನ್ನ ರಸಿಕತೆಯ ಪ್ರದರ್ಶನವಲ್ಲಿ ಕೆಲಸ ಕೆಟ್ಟೀತು. ಜೋಕೆ" ಎಂದು ಹೇಳಿ ಆಂಗ್ಲ ಉಡುಪಿನ ವ್ಯಕ್ತಿ ಅಲ್ಲಿಂದ ಹೊರಟ.

ಆ ಮೇಲೆ ಸ್ವಲ್ಪ ಹೊತ್ತಿನ ತರುವಾಯ ಟ್ಯಾಕ್ಸಿಯೊಂದು ಮನೆಯ ಮುಂದೆ ನಿಂತಿತು. ಕಾಮೇಶ್ ಚೌದುರಿ ಸ್ವತಃ ಕಾರು ನಡೆಸುತ್ತಿದ್ದ. ಕಾರಲ್ಲಿದ್ದ ರಮಾನಂದ್ ಮತ್ತು ಪ್ರಮೀಳಾ ಕೆಳಗಿಳಿದು ಮೂರನೆಯ ಅಂತಸ್ಥಿಗೆ ಹೋದರು.

ಬೊಂಬಾಯಿನ ಅಧಿಕಾಂಶ ಮನೆಗಳಂತೆ ಅದು ಕೂಡಾ ಅನೇಕ ಅಂತಸ್ಥುಗಳಿದ್ದು ಸಣ್ಣ ಸಣ್ಣ ವಾಸದ ಮನೆಗಳಾಗಿ ವಿಭಾಗಿಸಲ್ಪಟ್ಟಿತ್ತು. ನಾಲ್ಕನೆಯ ಅಂತಸ್ತಿನಲ್ಲಿ ಅಂತಹ ಎಂಟು ಹತ್ತು ಪ್ರತ್ಯೇಕ ಮನೆಗಳಿದ್ದವು. ಕಿಶೋರಚಂದ್ರನ ಹೆಸರಿದ್ದ ಮನೆಯ ಬಾಗಿಲನ್ನು ರಮೇಶ ಒಂದೆರಡು ಸಾರಿ ತಟ್ಟಿದ. ಎಲೆಕ್ಟ್ರಿಕ್ ಬೆಲ್ಲು ಹೊಡೆದ. ಆದರೂ ಯಾರೂ ಬಂದು ಬಾಗಿಲು ತೆರೆಯಲಿಲ್ಲ. ಅದೇ ಅಂತಸ್ತಿನ ಇನ್ನೊಂದು ಮನೆಯಿಂದ ಹೊರಗೆ ಬಂದ ಒಬ್ಬ ವ್ಯಕ್ತಿ ಅಪರಿಚಿತರ ಈ ಅಗಚಾಟಲು ನೋಡಿ ಮರುಕದಿಂದ " ಬಾಗಿಲು ತೆಗೆದಿದೆ. ಒಳಗೆ ನೋಡಿ ಸಾರ್. ಮನೆಯಲ್ಲಿ ಜನರಿದ್ದಾರೆ" ಎಂದು ಹೇಳಿದ. ಆಗ ರಮಾನಂದ ಗಟ್ಟಿಯಾಗಿ ಬಾಗಿಲನ್ನು ತಳ್ಳಿದ. ಬಾಗಿಲು ತೆರೆದು ಕೊಂಡಿತು. ಹೋಗುತ್ತಲೆ ಒಂದು ಸಣ್ಣ ವರಾಂಡ. ಅದರಿಂದಾಚೆ ದಿವಾನ್ ಖಾನೆ ಮತ್ತು ವಾಸದ ಕೊಟಡಿಗಳು. ರಮಾನಂದ್ ಮತ್ತು ಪ್ರಮೀಳಾ ದಿವಾನ್‌ಖಾನೆಯ ಬಾಗಿಲಲ್ಲಿ ನಿಂತು ಕೂಗಿದರು. ಉತ್ತರವಿಲ್ಲ. ಮೇಜು ಕುರ್ಜಿಗಳು ಅಸ್ತವ್ಯಸ್ತವಾಗಿ ಇಡಲ್ಪಟ್ಟಿತ್ತು. ಮನೆಯಲ್ಲಿ ಯಾರೂ ಇದ್ದಂತೆ ಕಾಣಲಿಲ್ಲ. ಆಗ ರಮಾನಂದ್ ವರಾಂಡವನ್ನು ದಾಟಿ ರಸ್ತೆ ಕಡೆಯ ಬಿಸಿಲು ಮುಚ್ಚಿಗೆ ಹೋಗಿ ಕೆಳಗೆ ನೋಡಿದನು. ಕಾಮೇಶ್ ಕಾರಿಂದ ಇಳಿದು ತಲೆಯೆತ್ತಿ ಮನೆಯ ಅಂತಸ್ತುಗಳನ್ನೂ ಕಿಟಕಿಗಳನ್ನೂ ಎಣಿಸುತ್ತ ನಿಂತಿದ್ದ. ರಮಾನಂದ

ಕೈ ಬೀಸಿದ್ದನ್ನು ಕಂಡ ಕೂಡಲೆ ಅವನು ಮನೆಯ ಒಳಹೊಕ್ಕು ನಾಲ್ಕನೆಯ ಅಂತಸ್ತಿಗೆ ಹೋದ.

"ಇಲ್ಲಿಯ ಸ್ಥಿತಿ ವಿಚಿತ್ರವಾಗಿದೆ, ಕಾಮೇಶ್. ಮನೆಯಲ್ಲಿ ಯಾರೂ ಇರುವ ಹಾಗಿಲ್ಲ."

"ನಮ್ಮ ಸಾಹಸ ಕಾರ್ಯಗಳು ಇಲ್ಲಿಂದಲೇ ಪ್ರಾರಂಭವಾಗುವಂತಿದೆ ಹಾಗಾದರೆ"

ಎಂದು ಕಾಮೇಶ್ ದಿವಾನ್‌ಖಾನೆಯ ಪಾರ್ಶ್ವದಲ್ಲಿದ್ದ ಕೊಟಡಿಗಳನ್ನು ಒಂದೊಂದಾಗಿ ಶೋಧಿಸಲು ಪ್ರಾರಂಭಿಸಿದ. ಅವುಗಳಲ್ಲಿ ಮೊದಲನೆಯದು ಮಲಗುವ ಮನೆ. ಹಾಸಿಗೆ ಹೊದ್ದಿಕೆಗಳು ಅಸ್ತವ್ಯಸ್ತವಾಗಿ ರಾತ್ರಿ ಯಾರೋ ಮಲಗಿದ್ದಂತೆ ಕಾಣುತ್ತಿತ್ತು. ಪಾರ್ಶ್ವದಲ್ಲಿ ಮೇಜು ಮತ್ತು ಕಪಾಟು. ಕಾಮೇಶ ಅವುಗಳನ್ನು ತೆರೆಯಲು ಪ್ರಯತ್ನಿಸಿದ. ಕಪಾಟು ಬೀಗ ಹಾಕಿತ್ತು. ಮೇಜಿನ ಖಾನೆಗಳಲ್ಲಿ ಕಾಗದ ಪತ್ರಗಳು, ಪೆನ್, ಗುಂಡಿ ಮುಂತಾದ ಸಾಮಾನ್ಯ ವಸ್ತುಗಳಿದ್ದವು.

ಕಾಮೇಶ್ ಇನ್ನೊಂದು ಕೊಟಡಿಯ ಬಾಗಿಲು ತೆರೆದ. ಉಗ್ರಾಣವಾಗಿ ಉಪಯೋಗಿಸುತ್ತಿದ್ದಂತೆ ಕಂಡಿತು. ನಿತ್ಯೋಪಯುಕ್ತವಲ್ಲದ ಪಾತ್ರೆ ಸಾಮಾನು ಗಳೂ ಕೆಲವು ಟ್ರಂಕುಗಳೂ ಅಲ್ಲಿಡಲ್ಪಟ್ಟಿದ್ದವು.

"ಈ ಎರಡು ಕೊಟಡಿಗಳಲ್ಲೂ ಇದ್ದ ವಸ್ತುಗಳು ಇದ್ದಂತೆಯೇ ಇವೆ. ಆದರೆ ದಿವಾನ್‌ಖಾನೆಯಲ್ಲಿ ಒಂದು ಸಣ್ಣ ಹೋರಾಟ ನಡೆದಂತಿದೆ"

"ನೀನು ದಿವಾನ್‌ಖಾನೆಯನ್ನು ಸರಿಯಾಗಿ ನೋಡಲೇ ಇಲ್ಲ. ಹೋರಾಟ ನಡೆದಿದೆಯೆಂದು ಹೇಗೆ ಹೇಳುತ್ತಿ ?"—ರಮಾನಂದ್ ಪ್ರಶ್ನಿಸಿದ.

"ಕುರ್ಜಿ ಮೇಜುಗಳು ಕೆಳಗುರುಳಿ ಪುನಃ ಜೋಡಿಸಲ್ಪಟ್ಟಂತೆ ಕಾಣು ವುದಿಲ್ಲವೆ ? ಅವು ಯಥಾಸ್ಥಾನದಲ್ಲಿಲ್ಲವೆಂಬುದನ್ನು ನಾನು ದಿವಾನ್‌ಖಾನೆಗೆ ಬಂದಾಗಲೇ ನೋಡಿದೆ."

ಎಂದು ಕಾಮೇಶ್ ಮೇಜು ಮೊದಲಿದ್ದ ಸ್ಥಳದಲ್ಲಿಲ್ಲವೆಂಬುದನ್ನು ತೋರಿಸಿದ. ಮೇಜಿನ ಕಾಲುಗಳಿದ್ದ ಕಡೆ ಹಳೆಯ ಗುರುತುಗಳು ಸ್ಪಷ್ಟವಾಗಿ

ಕಾಣುತ್ತಿದ್ದವು. ಮೇಜಿನ ಸುತ್ತ ಕುರ್ಜಿಗಳು ಅಡ್ಡಾದಿಡ್ಡಿಯಾಗಿ ಜೋಡಿ ಸಲ್ಪಟ್ಟಿದ್ದವು.

"ಈಗ ನಾವೇನು ಮಾಡುವುದು ?"

ಕರ್ತವ್ಯ ಮೂಢನಾಗಿ ರಮಾನಂದ್ ಕೇಳಿದ.

"ಮನೆಯ ಉಳಿದ ಭಾಗವಲ್ಲಿ ನೋಡಬೇಕು ?"

"ಯಾರಾದರೂ ಹೆಂಗಸರಿದ್ದರೆ ?"

"ಕಷ್ಟಕ್ಕೀಡಾಗಿರುತ್ತಾರೆ. ಇಲ್ಲವೇ ಓಡಿ ಹೋಗಿರುತ್ತಾರೆ."

"ಇಂತಹ ಸಂದರ್ಭದಲ್ಲಿ ನಾವು ಪೋಲೀಸರಿಗೆ ತಿಳಿಸಿದರೆ ಒಳ್ಳೆಯ ದಲ್ಲವೆ ?"

"ಪೋಲೀಸರನ್ನು ಕರೆಯುವ ಅಗತ್ಯವಿನ್ನೂ ಹುಟ್ಟಿಲ್ಲ."

ಎನ್ನುತ್ತಾ ಕಾಮೇಶ್ ಮನೆಯ ಒಳಭಾಗವನ್ನು ಪ್ರವೇಶಿಸಿದ. ರಮಾನಂದ್ ಪ್ರಮೀಳಾ ಅವನ ಹಿಂದೆ ಹೋದರು.

ಮನೆಯ ಹಿಂದೆ ಒಂದು ಅಡಿಗೆಯ ಕೋಣೆ. ಅಲ್ಲಿಯೂ ಯಾರೂ ಇರಲಿಲ್ಲ. ಒಲೆಯ ಮುಂದೆ ಕೆಲವು ಪಾತ್ರೆಗಳು, ಹಚ್ಚಿಟ್ಟ ತರಕಾರಿ ಇದ್ದವು. ಕಾಮೇಶ್ ಅಲ್ಲಿ ನಿಲ್ಲದೆ ಬಚ್ಚಲ ಮನೆಯ ಹತ್ತಿರ ಹೋದ. ಬಾಗಿಲು ಮುಚ್ಚಿತ್ತು. ಒಳಗೆ ಅಗುಳಿ ಹಾಕಿದ್ದಂತೆ ಕಂಡಿತು.

"ಯಾರು ಒಳಗೆ ? ಧೈರ್ಯವಾಗಿ ಬಾಗಿಲು ತೆಗೆದುಕೊಂಡು ಹೊರಗೆ ಬನ್ನಿ. ನಾವು ನಿಮ್ಮವರೇ" ಎಂದು ಹೇಳುತ್ತಾ ಗಟ್ಟಿಯಾಗಿ ಬಾಗಿಲು ತಟ್ಟಿದ. ಉತ್ತರವಿಲ್ಲ. ಆಗ ಕಾಮೇಶ್ ಬಾಗಿಲನ್ನು ಬಲವಾಗಿ ಕಾಲಿಂದ ಒದ್ದ, ದಡಾರನೆ ಬಾಗಿಲು ತೆರೆದುಕೊಂಡಿತು. ಒಳಗಿನ ದೃಶ್ಯವನ್ನು ನೋಡಿ ರಮೇಶ್ ಪ್ರಮೀಳಾ ಸ್ತಂಭಿತರಾದರು. ಸುಮಾರು ೪೦-೪೫ ವರ್ಷದ ಪುರುಷನೊಬ್ಬನು ಆಹತನಾಗಿ ಬಿದ್ದಿದ್ದನು. ಪ್ರಾಣಹೋಗಿ ಹೆಚ್ಚು ಹೊತ್ತಾಗಿರಲಿಲ್ಲ. ಹೊಟ್ಟೆ ಮತ್ತು ಎದೆಯ ಮೇಲೆ ಚೂರಿಯಿರಿತದ ಗಾಯಗಳಾಗಿ ರಕ್ತ ಹರಿದಿತ್ತು.

" ಈಗ ಪೋಲೀಸರ ಅಗತ್ಯ. ರಮಾನಂದ್, ನೀನು ಪಕ್ಕದಲ್ಲಿ ಎಲ್ಲಾದರೂ ಫೋನಿದೆಯೋ ನೋಡಿ ಪೋಲೀಸ್ ಠಾಣೆಗೆ ಸುದ್ದಿ ತಲಪಿಸು."

ಮೃತ್ಯು ಸಮ್ಮುಖದಲ್ಲಿ ಕಾಮೇಶ್ ಚೌಧುರಿ ಪತ್ತೇದಾರನಿಗೆ ಸಹಜವಾದ ಅಧಿಕಾರ ಕಂಠದಿಂದ ಈ ಮಾತು ಹೇಳಿದನು. ಬ್ಯಾರಿಸ್ಟರ್ ರಮಾನಂದ್ ಮರು ಮಾತಾಡಲಿಲ್ಲ. ಕೆಳಗಿಳಿದು ಟೆಲಿಫೋನ್ ಎಲ್ಲಿದೆಯೆಂದು ಹುಡುಕಲು ಹೋದನು.

" ಬೆಳಿಗ್ಗೆ ಏಳುತ್ತಲೆ ಹುಬ್ಬುಗಳು ಹಾರಿದವು. ಏನೋ ಅನರ್ಥವಿದೆಯೆಂದು ಭಾವಿಸಿದೆ "—ಪ್ರಮೀಳಾ ಹೇಳಿದಳು.

" ಹೆಂಗಸರ ಹುಬ್ಬು ಹಾರುವುದು ಅನರ್ಥವೆಂದು ನನ್ನ ಶಬ್ದ ಕೋಶದಲ್ಲಿಲ್ಲ ಪ್ರಮೀಳಾ. ಅದೂ ನಿನ್ನಂತ ಸುಂದರಿಯ ಹುಬ್ಬುಗಳು !"

ಕಾಮೇಶ್ ನಗೆಯ ದನಿಯಿಂದ ಉತ್ತರ ಕೊಟ್ಟ.

" ಯಾವಾಗಲೂ ನಿಮಗೀ ಲಲ್ಲೆ ಮಾತೇ "

" ಹೆಣ್ಣಿನ ಹುಬ್ಬು ಹಾರುವಾಗ ಅದರಡಿಯಲ್ಲಿ ಚಲ್ಲೆ ನೋಟವೊಂದು ಇಣಕಿ ನೋಡುತ್ತದೆ. ಆ ಕಟಾಕ್ಷ ಬಾಣಗಳ ಹೊಡೆತ ಅನರ್ಥವೆಂದು ಭಾವಿಸುವ ಅರಸಿಕರಿಗೆ ಹುಬ್ಬು ಹಾರುವುದೂ ಅನರ್ಥವೇ "

" ನಾಕುಮಾಡಿ ನಿಮ್ಮ ಅನರ್ಥ ಕೋಶವನ್ನು "

" ಅದನ್ನು ಬೆಳೆಸುವ ಅವಕಾಶವೂ ಇಲ್ಲ ನನಗೆ. ಮನೆಯಲ್ಲಿ ಕೊಲೆಯಾಗಿದೆಯೆಂಬ ಸುದ್ದಿ ಹರಡಿತೋ ಇಲ್ಲವೋ ಪೋಲೀಸರಿಗೆ ಮೊದಲೇ ಜನ ಗುಂಪು ಸೇರುತ್ತದೆ. ಅಷ್ಟರಲ್ಲಿ ನನ್ನ ಕೆಲಸ ಮುಗಿಸಿಕೊಳ್ಳಬೇಕು "

ಎಂದು ಹೇಳಿ ಕಾಮೇಶ್ ಮೃತನ ದೇಹವನ್ನು ಮುಟ್ಟದೆ, ಅದು ಬಿದ್ದಿದ್ದ ರೀತಿ, ಗಾಯಗಳು, ಮುಖ ಚಹರೆ ಮುಂತಾದವುಗಳನ್ನು ಎಚ್ಚರದಿಂದ ಪರೀಕ್ಷಿಸಿದ. ಪ್ರಾಣ ಹೋಗುವ ಮೊದಲು ಬಚ್ಚಲ ಮನೆಯ ಸಿಮೆಂಟ್ ನೆಲದ ಮೇಲೆ ಮೃತನು ಏನನ್ನೋ ಬರೆಯಲು ಪ್ರಯತ್ನಿಸಿದಂತೆ ಕಂಡಿತು. ಬಲಗೈಯ ಬೆರಳುಗಳು ರಕ್ತಮಯವಾಗಿದ್ದವು. ಇರಿಯಲ್ಪಟ್ಟು ಕೆಳಗೆ ಬಿದ್ದ ಮೇಲೆ

ಗಾಯ ಮುಟ್ಟಿ ಬೆರಳುಗಳು ರಕ್ತವಾಗುವುದು ಸಹಜ. ಆದರೆ ಮೃತನು ಪ್ರಯತ್ನ ಪೂರ್ವಕವಾಗಿ ಬಲಗೈಯನ್ನು ಮುಂದೆ ಚಾಚಿ ನೆಲದಮೇಲೆ ರಕ್ತದಿಂದ ತೊಯ್ದ ಬೆರಳುಗಳಿಂದ ಏನನ್ನೋ ಬರೆಯಲು ಮೊದಲು ಮಾಡಿದ್ದನು. ನಾಲ್ಕೈದು ಅಕ್ಷರಗಳನ್ನು ಬರೆಯುವುದರೊಳಗಾಗಿ ಶಕ್ತಿಗುಂದಿ ಕೈ ಹಾಗೆಯೇ ನಿಂತಿತ್ತು. ಕಾಮೇಶ್ ನೆಲವನ್ನು ಎಚ್ಚರದಿಂದ ಪರೀಕ್ಷಿಸಿದನು. ಉರ್ದು ಲಿಪಿಯಲ್ಲಿ ಅಸ್ಫುಟವಾಗಿ ಕೆಲವು ಅಕ್ಷರಗಳು ಕಾಣುತ್ತಿದ್ದುವು—ರಾ—ಜ್—ಕೋ—ಟ್—ಕಿ—ಎಂದು.

ಕಾಮೇಶ್ ಅಕ್ಷರಗಳನ್ನು ಸರಿಯಾಗಿ ಗುರುತಿಸಿಕೊಂಡು ಆ ಮೇಲೆ ಅಡಿಗೆ ಮನೆಯಿಂದ ಪಾತ್ರೆಯೊಂದರಲ್ಲಿ ನೀರು ತಂದು ಅದರ ಮೇಲೆ ಸುರಿದನು.

"ಏನು ಮಾಡುತ್ತಿದ್ದೀರಿ! ಪೋಲೀಸರು ಬರುವ ಮೊದಲೇ?"

—ಪ್ರಮೀಳಾ ಬೆದರಿ ನುಡಿದಳು.

"ನೀನು ರಮಾನಂದನ ಸೆಕ್ರೆಟರಿಯಾಗಿ ನಾನು ಕಲಿಸಿದ್ದೆಲ್ಲ ಮರೆತಂತಿದೆ ಪ್ರಮೀಳಾ.

ನಶಿಷ್ಯದೋಷೇಣ ಗುರುರ್ವಿಮುಚ್ಯತೇ

ಎಂದು ಎಲ್ಲೊ ಓದಿದ ನೆನಪು. ಶಿಷ್ಯನ ದೋಷ ಗುರುವನ್ನು ಭಾಧಿಸುತ್ತದೆ. ನಿನ್ನಲ್ಲಿ ನನ್ನ ಪರಿಶ್ರಮವೆಲ್ಲ ವ್ಯರ್ಥವಾಯಿತು. ಮೃತನು ಹಾರಿ ಹೋಗುತ್ತಿದ್ದ ಪ್ರಾಣ ವಾಯುವನ್ನು ಕ್ಷಣಕಾಲ ಹಿಡಿದು ನಿಲ್ಲಿಸಿ, ಕೊನೆಯುಸಿರಿನೊಡನೆ ರಕ್ತದಲ್ಲಿ ಬರೆದ ಈ ಲಿಪಿ ನಮಗೆ ಅವನ ಸಂದೇಶ. ಪೋಲೀಸರಿಗೆ ಅದರಿಂದೇನಾಗಬೇಕು?"

ಎಂದು ಹೇಳಿ ಕಾಮೇಶ್ ಪುನಃ ನೀರು ತಂದು ಹೊಯ್ದು ನೆಲದ ಮೇಲಿನ ಅಸ್ಫುಟ ಲಿಪಿ ಪೂರ್ಣವಾಗಿ ಅಳಿಸುವಂತೆ ಮಾಡಿ "ಇನ್ನು ಇಲ್ಲಿ ನಮಗೇನೂ ಕೆಲಸವಿಲ್ಲ. ನಡೆ, ದಿವಾನ್‌ಖಾನೆಗೆ ಹೋಗಿ ಪೋಲೀಸರನ್ನು ಎದುರುಗೊಳ್ಳೋಣ" ಎಂದನು.

ರಮಾನಂದ್ ಬಂದಾಗ ಕಾಮೇಶ್ ಚೌದುರಿ ದಿವಾನ್‌ಖಾನೆಯ ಸೋಫಾದ ಮೇಲೆ ಕುಳಿತು ಸಿಗರೇಟ್ ಸೇದುತ್ತಾ ಆಲೋಚನೆಯಲ್ಲಿ ಮಗ್ನ

ನಾಗಿದ್ದ. ಪ್ರಮೀಳಾ ಮೇಜಿನ ಮುಂದೆ ಕುಳಿತು ಹಳೆಯ ವಾರ್ತಾ ಪತ್ರಿಕೆ ಯೊಂದನ್ನು ಓದುತ್ತಿದ್ದಳು.

" ಪೋಲೀಸರು ಯಾವಾಗ ಬರುತ್ತಾರೆ ?" ಕಾಮೇಶ್ ಕೇಳಿದ.

" ಇನ್ನೇನು ಬಂದು ಬಿಡಬಹುದು. ಆದರೆ ನಮಗೆ ಒಂದು ದಿನವೆಲ್ಲಾ ವ್ಯರ್ಥವಾದಂತೆಯೇ ? ಮಹಜರ್ ಮುಗಿಯುವವರೆಗೆ ನಾವೀಸ್ಥಳವನ್ನು ಬಿಡುವಂತಿಲ್ಲ."

" ಪೋಲೀಸರು ನಿಧಾನವಾಗಿ ಬರಲಿ. ಈ ಸಂಬಂಧದಲ್ಲಿ ಅವರಿಗೆ ಯಾವ ವಿಷಯ ತಿಳಿಸಬೇಕು. ಯಾವುದನ್ನು ತಿಳಿಸಬಾರದು ಎಂದು ಯೋಚನೆ ಮಾಡಿದ್ದೀಯಾ ?"

" ನಡೆದ ವಿಚಾರವೆಲ್ಲವನ್ನೂ ಯಥಾವತ್ತಾಗಿ ತಿಳಿಸಿ ಬಿಡುವುದು."

" ಅದು ಸರಿಯಾದ ಮಾರ್ಗವಲ್ಲ. ರತ್ನಹಾರದ ವಿಚಾರ ಈಗ ಯಾರಿಗೂ ತಿಳಿಸದಿದ್ದರೆ ಒಳ್ಳೆಯದು. ಕಿಷನ್‌ಚಂದ್ ಅದನ್ನು ನಿಮ್ಮ ಹತ್ತಿರ ಜೋಪಾನ ವಾಗಿಟ್ಟಿದ್ದನೆಂಬುದು ರಹಸ್ಯವಾಗಿರಬೇಕು."

" ಹಾಗಾದರೆ ಗುಲಾಬ್‌ಸಿಂಗ್ ನನ್ನನ್ನು ಹುಡುಕಿಕೊಂಡು ಬೊಂಬಾ ಯಿಗೆ ಬಂದ ಕಾರಣ ?"

" ನೀನು ಕಿಷನ್‌ಚಂದನ ವಕೀಲನಲ್ಲವೆ ? ಬೊಂಬಾಯಲ್ಲಿ ಅವನ ವ್ಯವಹಾರವೆಲ್ಲ ನಿನ್ನ ಮುಖಾಂತರವಾಗಿಯೇ ನಡೆಯುತ್ತಿದೆ. ಅವನ ವಾರಸ ದಾರರು, ಸಂಬಂಧಪಟ್ಟವರು ನಿನ್ನನ್ನು ಹುಡುಕಿಕೊಂಡು ಬರುವುದು ಸಹಜ. ಗುಲಾಬ್‌ಸಿಂಗನ ವರ್ತನೆ ಮತ್ತು ಪರಿಚಯದ ವಿಚಾರ ಸಂದೇಹ ಹುಟ್ಟಿದ್ದ ರಿಂದ ನಾವೇ ಇಲ್ಲಿಗೆ ಬಂದೆವು. ಇಷ್ಟು ವಿಚಾರ ತಿಳಿಸಿದರೆ ಸಾಕು."

" ಮೃತನು ಗುಲಾಬ್‌ಸಿಂಗನೇ ಎಂದು ಭಾವಿಸುವೆಯಾ ?"

" ಮಹಜರಿನಲ್ಲಿ ಆ ವಿಚಾರ ಪರಿಷ್ಕಾರವಾಗುತ್ತೆ. ಇನ್ನೊಂದು ಮಾತು. ಪೋಲೀಸರಿಗೆ ನಾನು ಪತ್ತೇದಾರನೆಂದು ತಿಳಿಯದಿದ್ದರೆ ಒಳ್ಳೆಯದು. ವಿಷಯ ಸಂಗ್ರಹಕ್ಕೆ ಹೆಚ್ಚು ಅವಕಾಶವಿರುತ್ತದೆ. ಅವರಿಗೆ ನಾನು ಪತ್ತೇದಾರನೆಂದು

ತಿಳಿದರಾಯಿತು, ಕೃತ್ಯದ ವಿಚಾರಣೆಯನ್ನು ಉಪೇಕ್ಷಿಸಿ ವಾಸ್ತವಾಂಶಗಳನ್ನು ನನ್ನಿಂದ ಮುಚ್ಚಿಡಲು ಪ್ರಯತ್ನಿಸುತ್ತಾರೆ."

"ಆಗಬಹುದು. ನನ್ನ ಮಿತ್ರ, ವಿಶ್ರಾಂತ ಮಿಲಿಟರಿ ಅಧಿಕಾರಿ ಎಂದು ನಿನ್ನನ್ನು ಪೋಲೀಸರಿಗೆ ಪರಿಚಯ ಮಾಡಿ ಕೊಡುತ್ತೇನೆ."

"ಮಹಜರಿನಲ್ಲಿ ನಾನೂ ಸಾಕ್ಷಿ ಕೊಡುವುದು ಅಗತ್ಯವೆ?"—ಪ್ರಮೀಳಾ ಪ್ರಶ್ನಿಸಿದಳು.

"ಡಿಲ್ಲಿಯ ಟ್ರಂಕ್‌ಕಾಲ್ ವಿಚಾರ ತಿಳಿಸಬೇಕಾಗುವುದು. ರತ್ನಹಾರಕ್ಕೆ ಸಂಬಂಧಿಸಿದ ಮಾತುಗಳನ್ನು ಬಿಟ್ಟು ಉಳಿದುದನ್ನು ಹೇಳಬಹುದು."

ಹೊರಗೆ ಕಾರಿನ ಶಬ್ದವಾಯಿತು. ರಮಾನಂದ್ ಚೌದುರಿ ಎದ್ದು ಕಿಟಕಿಯ ಹತ್ತಿರ ಹೋಗಿ ನೋಡಿದಾಗ ಮೂವರು ಪೋಲೀಸರು ಕಾರಿಂದ ಇಳಿಯುತ್ತಿದ್ದರು.

ಪೋಲೀಸ್ ಅಧಿಕಾರಿ ರಮಾನಂದರಿಗೆ ಪರಿಚಿತ. ಕಾಮೇಶನಿಗೆ ಅಪರಿಚಿತ. ಕಾರಣ ಮಹಜರ್ ಹೆಚ್ಚುಕಾಲ ತೆಗೆದುಕೊಳ್ಳಲಿಲ್ಲ. ವಠಾರದಲ್ಲಿ ವಾಸವಿದ್ದ ಕೆಲವರನ್ನು ಪಂಚಾಯಿತರಾಗಿಟ್ಟುಕೊಂಡು ಅಧಿಕಾರಿ ಹೆಚ್ಚಿನ ದಕ್ಷತೆಯಿಂದಲ್ಲದಿದ್ದರೂ, ಶ್ಲಾಘನೀಯವಾದ ಅವಸರದಿಂದ ಹೇಳಿಕೆಗಳನ್ನು ತೆಗೆದುಕೊಂಡ. ಮಹಜರಿನಲ್ಲಿ ನೆರೆಹೊರೆಯವರಿಂದ ಕೆಲವು ಹೊಸ ವಿಚಾರಗಳು ವ್ಯಕ್ತವಾದವು. ವಾಚಕರ ಅವಗಾಹನೆಗಾಗಿ ಮುಂದೆ ಅವುಗಳನ್ನು ಸಂಗ್ರಹಿಸಿದೆ.

ಕಿಶೋರ್‌ಸಿಂಗ್ ಎರಡು ಮೂರು ವರ್ಷಗಳಿಂದ ಈ ಮನೆಯಲ್ಲಿದ್ದಾನೆ. ಅವನೊಬ್ಬ ಮಿಲಿಟರಿ ಕಂಟ್ರಾಕ್ಟರ್. ಮನೆಯಲ್ಲಿ ಅವನು ಮತ್ತು ಅಡಿಗೆಯವನ ಹೊರತಾಗಿ ಇನ್ನಾರೂ ಇಲ್ಲ. ಕಿಶೋರ್‌ಸಿಂಗ್ ಸಾಮಾನ್ಯವಾಗಿ ಬೊಂಬಾಯಲ್ಲಿರುವುದಿಲ್ಲ. ಪೂನಾ, ಡಿಲ್ಲಿ, ಬೆಂಗಳೂರು ನಗರಗಳಿಗೆ ಆಗಾಗ ಹೋಗಿ ಬರುತ್ತಿರುತ್ತಾನೆ. ಈಗೊಂದು ವಾರದ ಕೆಳಗೆ ಇಲ್ಲಿಗೆ ಬಂದಿದ್ದ. ಎರಡು ದಿನವಿದ್ದು ಹೊರಟು ಹೋದ. ಅವನ ಗೈರ್ ಹಾಜರಿಯಲ್ಲಿ ನಿನ್ನೆ ರಾತ್ರಿ ಅಡಿಗೆಯವನನ್ನು ನೋಡಲು ಹೊಸಬರಿಬ್ಬರು ಬಂದಿದ್ದರು. ಅವರು ರಾತ್ರಿ

ಮನೆಯಲ್ಲಿಯೇ ಇದ್ದಂತೆ ಕಾಣುತ್ತದೆ. ಏಕೆಂದರೆ ಇಂದು ಬೆಳಿಗ್ಗೆ ಹತ್ತುಗಂಟೆ ಸುಮಾರಲ್ಲಿ ಪಾರ್ಶ್ವದ ಹೋಟಲಿನ ಮಾಣಿ ಅವರಿಗೆ ಚಹ ಬಿಸ್ಕತ್ ತಂದು ಕೊಟ್ಟಿದ್ದನ್ನು ನೆರೆಯವರು ನೋಡಿದ್ದರು. ಅವರು ಯಾವಾಗ ಮನೆಯಿಂದ ಹೊರಗೆ ಹೋದರು ಎಂಬುದು ತಿಳಿಯದು. ಕೊಲೆಯಾಗಿದ್ದ ವ್ಯಕ್ತಿ ಕಿಶೋರ ಸಿಂಗನೂ ಅಲ್ಲ. ಅಡಿಗೆಯವನೂ ಅಲ್ಲ. ಯಾರೋ ಅಪರಿಚಿತ. ಅವನು ಮನೆಗೆ ಬಂದದ್ದನ್ನು ನೆರೆಯವರಾರೂ ನೋಡಿರಲಿಲ್ಲ.

ಪಾರ್ಶ್ವದ ಹೋಟಲಿನ ಯಜಮಾನ ಮತ್ತು ಮಾಣಿಯೂ ಸಾಕ್ಷ್ಯ ಕೊಟ್ಟರು. ಹತ್ತು ಗಂಟೆ ಹೊಡೆಯುತ್ತಿದ್ದಾಗ ಅಡಿಗೆಯವನೇ ಬಂದು ಮೂರು ಟೋಸ್ಟ್, ಚಾ ಕಳುಹಿಸುವಂತೆ ಹೇಳಿ ದುಡ್ಡು ಕೊಟ್ಟ. ಕಿಶೋರ್‌ಸಿಂಗ ಇಲ್ಲದಿದ್ದಾಗ ಆಗಾಗ್ಗೆ ಹೋಟಲಿಂದ ಅವನು ತಿಂಡಿ ತೀರ್ಥಗಳನ್ನು ತರಿಸಿ ಕೊಳ್ಳುತ್ತಿದ್ದ. ಯಜಮಾನ ಊರಲ್ಲಿರುವಾಗ ಯಾವಾಗಲೂ ತರಿಸಿಕೊಂಡಿರಲಿಲ್ಲ. ಯಜಮಾನನನ್ನು ನೋಡಿದ್ದೇನೆ. ಪರಿಚಯವಿಲ್ಲ. ಕೊಲೆಯಾಗಿದ್ದ ವ್ಯಕ್ತಿ ಯಾರೋ ತಿಳಿಯದು.

ಸಾಕ್ಷ್ಯಗಳು ಮುಗಿದ ಮೇಲೆ ಕಾಗದ ಪತ್ರಗಳಿಗಾಗಿ ಮನೆಯನು ಹುಡುಕಿದರು. ಕಿಶೋರಸಿಂಗನು ಬೆಂಗಳೂರಿಂದ ಬರೆದಿದ್ದ ಎರಡು ಕಾಗದಗಳೊ ಸಿಕ್ಕವು. ಅವುಗಳಲ್ಲಿ ಅವನ ಬೆಂಗಳೂರು ವಿಳಾಸವೂ ಬರೆಯಲ್ಪಟ್ಟಿತ್ತು. ಉಳಿದ ಕಾಗದ ಪತ್ರಗಳು ಅವನ ಕಂಟ್ರಾಕ್ಟು ವ್ಯವಹಾರಕ್ಕೆ ಸಂಬಂಧಿಸಿದ್ದು. ಅನಂತರ ಮೃತನ ದೇಹದ ಮಹಜರ್ ನಡೆಯಿತು. ಫೋಟೋ ಗ್ರಾಫರನ್ನು ಕರೆಸಿ ಭಾವ ಚಿತ್ರಗಳನ್ನು ತೆಗೆದುಕೊಂಡ ಮೇಲೆ ಶವದ ಮೈಮೇಲಿನ ಗಾಯಗಳು ಮತ್ತು ಉಡುಪಿನ ವಿವರಗಳನ್ನು ಬರೆದುಕೊಂಡರು. ಹೊಟ್ಟೆಯ ಮೇಲೆ ಚೂರಿಯಿರಿತದ ಎರಡು ಗಾಯಗಳಿದ್ದವು. ರಕ್ತಹರಿದು ಹೆಪ್ಪು ಕಟ್ಟಿತ್ತು. ಬಚ್ಚಲ ಮನೆಯ ಹೊರಗೆ ಕೃತ್ಯ ನಡೆದು, ಅನಂತರ ಅವನನ್ನು ಒಳಗೆ ತಳ್ಳಿದಂತೆ ಕಂಡಿತು. ಮೃತನ ಅಂಗಿ ಜೇಬುಗಳನ್ನು ಹುಡುಕಿದಾಗ ಒಂದು ಐದು ರೂಪಾಯಿ ನೋಟು, ಡಿಲ್ಲಿಯಿಂದ ಬೊಂಬಾಯಿಗೆ ಮೂರು ದಿನಗಳ ಹಿಂದಿನ ಒಂದು ರೈಲ್ವೆ ಟಿಕೆಟ್, ಕೆಲವು ಚಿಲ್ಲರೆ ನಾಣ್ಯಗಳು ಸಿಕ್ಕಿದವು.

ಅದರ ವಿವರಗಳನ್ನು ಬರೆದುಕೊಳ್ಳುತ್ತಿದ್ದಾಗ ಕಾಮೇಶ್ ಪೋಲೀಸ್ ಅಧಿಕಾರಿಯನ್ನು ಕುರಿತು "ನೋಟು ಮತ್ತು ಟಿಕೆಟನ್ನು ನೋಡಬಹುದೇ ಸ್ವಾಮಿ" ಎಂದು ನುಡಿದ.

ಪೋಲೀಸ್ ಅಧಿಕಾರಿ ಉತ್ತರ ಹೇಳದೆ ಟಿಕೆಟ್ಟನ್ನೂ ನೋಟನ್ನೂ ಕಾಮೇಶನ ಕೈಗೆ ಕೊಟ್ಟ. ಟಿಕೆಟ್ ಸ್ವಲ್ಪ ಮಾಸಿತ್ತು. ನಾಲ್ಕು ದಿನಗಳ ಹಿಂದೆ ಡಿಲ್ಲಿಯಲ್ಲಿ ತೆಗೆದುಕೊಂಡದ್ದು. ಅದರಿಂದ ಪ್ರಯಾಣ ಮಾಡಿದ ವ್ಯಕ್ತಿ ಬೊಂಬಾಯನ್ನು ಎರಡು ದಿನಗಳ ಹಿಂದೆ ತಲಪಿರಬೇಕು. ನೋಟಿನ ಮೇಲೆ ಬ್ಯಾಂಕೊಂದರ ಸೀಲು ಬಿದ್ದಿತ್ತು. ಸೀಲಿನ ಅಡಿಯಲ್ಲಿ ಉರ್ದು ಲಿಪಿಯಲ್ಲಿ ಪೆನ್ಸಲಿನಿಂದ ಅಸ್ಫುಟವಾಗಿ "ದಾದು" ಎಂದು ಬರೆದಿತ್ತು. ಕಾಮೇಶ್ ಈ ವಿವರಗಳನ್ನು ಸ್ಥಿರಪಡಿಸಿಕೊಂಡು ಟಿಕೇಟನ್ನೂ ನೋಟನ್ನೂ ಪೋಲೀಸ್ ಅಧಿಕಾರಿಗೆ ಹಿಂದಿರುಗಿಸಿದ. ಅಧಿಕಾರಿ ದರ್ಪದ ದೃಷ್ಟಿಯಿಂದ ರಮಾನಂದನನ್ನು ನೋಡಿ "ಆಸಾಮಿ ಎರಡು ದಿನಗಳ ಹಿಂದೆ ಡಿಲ್ಲಿಯಿಂದ ಬೊಂಬಾಯಿಗೆ ಬಂದನೆಂದು ಟಿಕೇಟಿಂದ ಗೊತ್ತಾಗುತ್ತದೆ. ಅವನು ನೀವು ಹೇಳುವ ಗುಲಾಬ್ ಸಿಂಗನೇ ಆಗಿರಬಹುದು" ಎಂದನು.

"ಗುಲಾಬ್‌ಸಿಂಗ್, ವಿಮಾನದಲ್ಲಿ ಬೊಂಬಾಯಿಗೆ ಬಂದುದಾಗಿ ಹೇಳಿದ್ದ."

"ಅವನು ನಿಜವನ್ನೇ ನುಡಿದನೆಂದು ಹೇಗೆ ಹೇಳುವುದು? ಮೃತ ವ್ಯಕ್ತಿ ಗುಲಾಬ್‌ಸಿಂಗ್ ಅಲ್ಲವೆಂದು ರುಜುವಾತಾಗುವವರೆಗೆ ನಾವು ಮೃತನು ಗುಲಾಬ್ ಸಿಂಗನೆಂದೇ ತಿಳಿಯಬೇಕು. ಅದಕ್ಕೆ ಕಾರಣವಿದೆ."

ರಮಾನಂದ್ ಮಾತಾಡಲಿಲ್ಲ. ಕಾಮೇಶ್ ಕುತೂಹಲದಿಂದ ಕಣ್ಣುಗಳನ್ನರಳಿಸಿ ಮೆಚ್ಚಿಗೆಯ ದೃಷ್ಟಿಯೊಂದನ್ನು ಅಧಿಕಾರಿಯ ಮೇಲೆ ಬೀರಿದ. ಪ್ರಮೀಳಾ ಅಚ್ಚರಿಗೊಂಡವಳಂತೆ ಅಧಿಕಾರಿಯನ್ನೇ ನೋಡುತ್ತಿದ್ದಳು. ಈ ಮೆಚ್ಚಿಗೆಯ ಮುಜರೆಯಿಂದ ಸಂತುಷ್ಟನಾಗಿ ಅಧಿಕಾರಿ ಹೇಳಿದ: "ಪಾಕೀಸ್ಥಾನದಿಂದ ನಿರಾಶ್ರಿತರನೇಕರು ಈಗ ಭಾರತಕ್ಕೆ ಬರುತ್ತಿದ್ದಾರೆ. ಅವರಲ್ಲಿ ಯಾರು ನಿಜವಾಗಿ ನಿರಾಶ್ರಿತರು, ಯಾರು ಮೋಸಗಾರರು ಎಂಬುದನ್ನು ತಿಳಿಯುವುದು ಪೋಲೀಸರಿಗೆ ಕಷ್ಟವಾಗಿದೆ. ಈ ಗುಲಾಬ್‌ಸಿಂಗ್ ಎರಡನೆಯ

ಗುಂಪಿಗೆ ಸೇರಿದ ವ್ಯಕ್ತಿಯೆಂದು ಕಾಣುತ್ತದೆ. ಕಿಷನ್‌ಚಂದರ ಹೆಸರು ಹೇಳಿ ರಮಾನಂದರಿಗೆ ಮೋಸ ಮಾಡಲು ಬಂದಿರಬೇಕು."

"ಅವನನ್ನು ಕೊಲೆ ಮಾಡಿದ ಕಾರಣ?"

ಪ್ರಮೀಳಾ ಕುತೂಹಲದ ಕಂಠದಿಂದ ಪ್ರಶ್ನಿಸಿದಳು.

"ಈ ಜಾತಿಯ ಕಳ್ಳರು ಒಬ್ಬೊಬ್ಬರಾಗಿ ಕೆಲಸ ಮಾಡುವುದಿಲ್ಲ. ನಿರಾಶ್ರಿತರಂತೆ ನಟಿಸುತ್ತಾ ನಮ್ಮ ಕಾದು ಜನರನ್ನು ವಂಚಿಸುವುದು ಈ ಧೂರ್ತರ ತಂತ್ರ. ತಮ್ಮ ತಮ್ಮಲ್ಲಿ ಜಗಳ ಹುಟ್ಟಿದಾಗ ಕೊಲೆಗೂ ಅವರು ಹೇಸುವುದಿಲ್ಲ. ಗುಲಾಬ್‌ಸಿಂಗನು ತನ್ನ ಸಂಗಡಿಗರಿಂದಲೆ ಕೊಲೆಯಾಗಿರಬೇಕು. ಕಿಶೋರಸಿಂಗನ ಅಡಿಗೆಯವನೂ ಈ ಗುಂಪಿನಲ್ಲಿ ಸೇರಿದ್ದಾನೆ. ಗುಂಪಿನ ಜಾಡು ನನಗೆ ಗೊತ್ತಿದೆ. ಕೆಲವು ದಿನಗಳೊಳಗಾಗಿ ಕೊಲೆಗಾರರನ್ನು ಪತ್ತೆಮಾಡಿ ನಿಮಗೆ ತಿಳಿಸುತ್ತೇನೆ."

ಪಂಚನಾಮೆಗೆ ರುಜು ಹಾಕಿ, ಅಧಿಕಾರಿಯಿಂದ ಬೀಳ್ಕೊಂಡು ರಮಾನಂದ್, ಕಾಮೇಶ್ ಚೌದುರಿ ಮತ್ತು ಪ್ರಮೀಳಾ ಸ್ಥಳಬಿಟ್ಟರು. ಕಾರು ಚೌಪತಿಯ ಹತ್ತಿರ ಬರುತ್ತಿದ್ದಾಗ ಕಾಮೇಶ್ ದೀರ್ಘವಾಗಿ ನಿಟ್ಟುಸಿರುಬಿಟ್ಟು, "ಈ ಅಧಿಕಾರಿಗಳ ದರ್ಪವೇ ನಮ್ಮ ದೇಶದಲ್ಲಿ ಅನೇಕ ಅಕೃತ್ಯಗಳು ಪತ್ತೆಯಾಗದಿರುವ ಕಾರಣ" ಎಂದು ನುಡಿದ.

ಅಲ್ಲಿಯವರೆಗೆ ಮೌನವಾಗಿದ್ದ ರಮಾನಂದ್ "ಯಾಕೆ ಹಾಗೆ ಹೇಳುತ್ತಿ, ಕಾಮೇಶ್. ಈ ಪೋಲೀಸ್ ಅಧಿಕಾರಿ ದಕ್ಷನೆಂದು ಹೆಸರಾಗಿದ್ದಾನೆ. ಅವನನ್ನು ನಾನು ಚೆನ್ನಾಗಿ ಬಲ್ಲೆ."

"ಅದೆಲ್ಲಾ ಆ ಮೇಲೆ ತಿಳಿಸುತ್ತೇನೆ. ಈಗಾಗಲೆ ಮೂರು ಗಂಟೆ. ಊಟಕ್ಕೆ ಹೋತಾ ಬಿತ್ತು. ಯಾವುದಾದರೂ ಒಳ್ಳೆ ಹೋಟಲಿಗೆ ಹೇಳಿ ಕಳುಹಿಸಿ ಪೂರಿ ಚಪಾತಿ ತರಿಸು. ತಿನ್ನುತ್ತಾ ಮಾತನಾಡೋಣ. ನಿನ್ನ ಕಛೇರಿಯ ಏಕಾಂತದಲ್ಲಿ ನಾವು ಆಲೋಚಿಸಬೇಕಾದ ವಿಷಯಗಳಿವೆ."

ಎಂದು ಹೇಳಿ ಕಾಮೇಶ್ ಟ್ಯಾಕ್ಸಿಯನ್ನು ರಮಾನಂದನ ಕಛೇರಿಯ ಮುಂದೆ ನಿಲ್ಲಿಸಿದ.

# ಐದನೆಯ ಪರಿಚ್ಛೇದ

ಉಪಹಾರ ಮುಗಿದು ಸಿಗರೇಟು ಹತ್ತಿಸುತ್ತಾ ಕಾಮೇಶ್ ಹೇಳಿದ— "ಮುಂದೇನು ಮಾಡಬೇಕೆಂದಿದ್ದೀರಿ ಬ್ಯಾರಿಸ್ಟರ್ ಸಾಹೇಬರೇ? ಕೇಸು ಮುಂದುವರೆಸುವುದೇ ಅಥವಾ ಪೋಲೀಸರ ಕೈಗೆ ಬಿಡುವುದೇ?"

"ನಮಗಿಷ್ಟವಿರಲಿ ಇಲ್ಲದಿರಲಿ ಗುಲಾಬ್‌ಸಿಂಗನ ಕೊಲೆಯಿಂದ ಕೇಸು ಪೋಲೀಸರ ಕೈಗೆ ಸೇರಿದಂತಾಗಿದೆ. ಅವರೇನು ಮಾಡುವರೋ ನೋಡೋಣ."

"ಕೊಲೆಯಾದ ಮನುಷ್ಯ ಗುಲಾಬ್‌ಸಿಂಗನೆಂದು ನಿನಗೆ ಸ್ಥಿರವಾಗಿದೆಯೇ?"

"ಸ್ಥಿರವಾಗಿಲ್ಲ. ಆದರೆ ಪೋಲೀಸ್ ಇನ್ಸ್ಪೆಕ್ಟರ್ ಹೇಳುವಂತೆ ಮುಕ್ಕಾಲು ಮೂರು ವೀಸ ಗುಲಾಬ್‌ಸಿಂಗನೇ ಆಗಿರಬೇಕು. ನಿನ್ನ ಅಭಿಪ್ರಾಯವೇನು ಪ್ರಮಿಳಾ? ನಿನ್ನ ಸಂಗಡ ಟೆಲಿಫೋನಿನಲ್ಲಿ ಮಾತಾಡಿದ ವ್ಯಕ್ತಿ ಮೃತನೇ ಆಗಿರಬಹುದೇ?"

ಪ್ರಮೀಳಾ ಯೋಚಿಸಿ ಉತ್ತರ ಕೊಟ್ಟಳು: "ಹೇಗೆ ಹೇಳಲಿ. ಸಾಯುವ ಮೊದಲು ನೋಡಿದ್ದರೆ ಧ್ವನಿ ಗುರುತಿಸಬಹುದಾಗಿತ್ತು."

"ಸತ್ತ ಮನುಷ್ಯನ ಧ್ವನಿಯನ್ನು ಗುರುತಿಸುವುದಕ್ಕೆ ಪ್ರಮೀಳಾ ಮಂತ್ರವಾದಿನಿಯೇ? ಅಥವಾ ಪತ್ತೆದಾರಿ ಕೆಲಸದಲ್ಲಿ ಚತುರೆಯೇ?

ಕಾಮೇಶ್ ನಗುತ್ತಾ ಹೇಳಿದ.

“ ನೀವಾಗಿದ್ದರೆ ಗುರುತಿಸುತ್ತಿದ್ದಿರಿ ಎಂತ ಕಾಣುತ್ತದೆ”—ಪ್ರಮೀಳಾ ಅಣಕದ ದನಿಯಿಂದ ಉತ್ತರಿಸಿದಳು.

“ ಏನು ನೀವು ಗುರುತಿಸಿದ್ದು. ಪತ್ತೆದಾರ ಮಹಾಶಯರೇ ?”

ರಮಾನಂದ್ ತಲೆಯೆತ್ತಿ ಕಾಮೇಶನ ಮುಖ ನೋಡಿ ಪ್ರಮೀಳೆಯ ಪ್ರಶ್ನೆಯನ್ನು ಸಮರ್ಥಿಸಿದ.

“ ಮೃತನು ಬಚ್ಚಲ ಮನೆಯ ಸಿಮೆಂಟ್ ನೆಲದ ಮೇಲೆ ರಕ್ತದಿಂದ ಬರೆದಿದ್ದುದನ್ನು ಆಗಲೆ ಮರತೆಯಾ, ಪ್ರಮೀಳಾ? ಎರಡು ಬಿಂದಿಗೆ ನೀರು ಸುರಿಯಬೇಕಾಯಿತು ಆ ಲಿಪಿಯನ್ನು ಅಳಿಸಲು.”

“ ಏನು ಬರೆದಿದ್ದದ್ದು ?” ರಮಾನಂದ್ ನುಡಿದ.

“ ನೀನು ಪೋಲೀಸರಿಗೆ ಫೋನ್ ಮಾಡಲು ಹೋದ ಮೇಲೆ ಶವ ಬಿದ್ದಿದ್ದ ಸ್ಥಿತಿಯನ್ನು ನಾನು ಚೆನ್ನಾಗಿ ಪರೀಕ್ಷಿಸಿದೆ. ಕೊಲೆ ಯಾವ ರೀತಿ ನಡೆದಿರ ಬೇಕೆಂದು ನಿರ್ಧರಿಸಿಕೊಂಡೆ. ಮೃತನು ಬಚ್ಚಲ ಮನೆಗೆ ಹೋಗುತ್ತಿದ್ದಾಗ ಕೊಲೆಗಡಕನು ಹಿಂದಿನಿಂದ ಆಕ್ರಮಣ ಮಾಡಿ ಚೂರಿಯಿಂದ ಎರಡು ಸಾರಿ ತಿವಿದಿದ್ದಾನೆ. ಮೃತನು ಹೊಡೆತದಿಂದ ತಪ್ಪಿಸಿಕೊಳ್ಳಲು ಬಚ್ಚಲ ಮನೆಗೆ ಹೋಗಿ ಬಾಗಿಲು ಮುಚ್ಚಿಕೊಂಡಿದ್ದಾನೆ. ಮುಚ್ಚಿದಾಗ ತಾನಾಗಿ ಚಿಲಕ ಬಿದ್ದಿರಬೇಕು. ಇಲ್ಲವೆ ಮೃತನೇ ಚಿಲಕ ಹಾಕಿಕೊಂಡಿರಬಹುದು. ಆದರೆ ಗಾಯ ತೀವ್ರವಾಗಿದ್ದುದರಿಂದ ಆ ಮೇಲೆ ನೆಲಕ್ಕೆ ಬಿದ್ದು ಬಿಟ್ಟಿದ್ದಾನೆ. ಕೊಲೆ ಗಡಕರು ಹೆದರಿ ಮನೆಯಿಂದ ಓಡಿ ಹೋಗಿದ್ದಾರೆ.”

“ ಹೋಟಲಿಂದ ಚಹ ತರಿಸಿ ಕುಡಿದ ಮೂವರಲ್ಲಿ ಮೃತನೂ ಒಬ್ಬ ನಾಗಿರಬೇಕು.”

“ ಕೊಲೆ ಮಾಡಿದವರು ಇಬ್ಬರೇ ಮೂವರೇ ಎಂಬುದು ಈಗ ಅಂತಹ ಮುಖ್ಯ ಪ್ರಶ್ನೆಯಲ್ಲ. ಅಡಿಗೆಯವನು ಕೊಲೆಯಲ್ಲಿ ಸೇರಿರಲಾರನೆಂದೇ ನನ್ನ ಭಾವನೆ. ಕೊಲೆಗಡಕರು ಚೂರಿಯಿಂದಿರಿದು ಓಡಿಹೋದ ಮೇಲೆ ಬಚ್ಚಲ ಮನೆಯಲ್ಲಿ ಏನು ನಡೆಯಿತೆಂಬುದನ್ನು ಕೇಳು, ರಮಾನಂದ್. ಮೃತನು ನೆಲದ

ಮೇಲೆ ಬಿದ್ದು ಒದ್ದಾಡುತ್ತಿದ್ದಾನೆ. ತಾನು ಉಳಿಯುವುದಿಲ್ಲವೆಂದೂ, ಒಂದೆರಡು ನಿಮಿಷಗಳಲ್ಲಿಯೇ ಪ್ರಾಣಾಂತವಾಗಬಹುದೆಂದೂ ಅವನಿಗೆ ಅರಿವಾಗುತ್ತದೆ. ತಾನು ಬೊಂಬಾಯಿಗೆ ಬಂದ ಉದ್ದೇಶ ವಿಫಲವಾಗುವುದಲ್ಲಾ ಎಂದು ಚಿಂತಿಸುತ್ತಾನೆ. ರಕ್ತದಿಂದ ತೊಯ್ದ ಬೆರಳುಗಳಿಂದ ನೆಲದ ಮೇಲೆ ಏನನ್ನೋ ಬರೆಯುತ್ತಾನೆ. ಬರೆದು ಮುಗಿಸುವುದರಲ್ಲಿ ಪ್ರಾಣವಾಯು ಹಾರಿ ಹೋಗುತ್ತದೆ."

"ಎದುರಿಗಿದ್ದು ನೋಡಿದವನಂತೆಯೇ ಹೇಳುತ್ತಿದ್ದೀಯಲ್ಲ, ಕಾಮೇಶ್. ನೀನು ಪತ್ತೆದಾರನಾಗದಿದ್ದರೆ ಪ್ರಸಿದ್ಧ ಫಿಲ್ಮ್ ಡೈರೆಕ್ಟರ್ ಆಗುತ್ತಿದ್ದೆ."

"ಖಂಡಿತವಾಗಿ. ಪತ್ತೆದಾರ, ಫಿಲ್ಮ್ ಡೈರೆಕ್ಟರ್ ಇಬ್ಬರೂ ಒಂದೇ ಜಾತಿಯ ಮನುಷ್ಯರು. ಒಬ್ಬನು ವಾಸ್ತವ ಘಟನೆಗಳ ವಿವರಗಳನ್ನು ಪತ್ತೆ ಮಾಡುತ್ತಾನೆ. ಇನ್ನೊಬ್ಬನು ಅವಾಸ್ತವ ಘಟನೆಗಳನ್ನು ವಾಸ್ತವದಂತೆ ಮಾಡಲು ಅಗತ್ಯವಾದ ವಿವರಗಳನ್ನು ಸೃಷ್ಟಿಸಿ ಕೊಳ್ಳುತ್ತಾನೆ. ಅಷ್ಟೇ ಅವರಿಬ್ಬರಿಗೂ ಇರುವ ಅಂತರ."

"ನಿನ್ನ ವ್ಯಾಖ್ಯಾನ ಮುಗಿಸಿ ನೆಲದ ಮೇಲೆ ಬರೆದಿದ್ದುದೇನು ಹೇಳು."

"ಅಂತಹ ವಿಶೇಷವೇನೂ ಇಲ್ಲ. ಉರ್ದು ಲಿಪಿಯಲ್ಲಿ ಐದು ಅಕ್ಷರಗಳು ಮಾತ್ರ. "ರಾಜ್‌ಕೋಟ್–ಕಿ" ಎಂದು."

"ಅದರ ಅರ್ಥ?"

"ನಿನಗೆ ನನ್ನ ವ್ಯಾಖ್ಯಾನಗಳು ಬೇಡ ಅಂದೆಯಲ್ಲ, ರಮಾನಂದ್. ನಾನು ಕಂಡದ್ದನ್ನ ಹೇಳಿದೆ. ನೀನೇ ಅದನ್ನ ಅರ್ಥ ಮಾಡಿಕೊಳ್ಳಬೇಕು."

"ಇದೇನು ಲಾ ಪಾಯಿಂಟೇ, ಕಾನೂನೇ ನಾನು ಅರ್ಥ ಮಾಡೋದಕ್ಕೆ. ವಕೀಲ ಕೆಲಸ ನಾನು ಮಾಡುತ್ತೇನೆ. ಪತ್ತೆದಾರಿ ಕೆಲಸ ಪತ್ತೆದಾರನು ಮಾಡಲಿ."

"ಪುನಃ ನನ್ನನ್ನು ವ್ಯಾಖ್ಯಾನಕ್ಕೆಳೆಯುತ್ತಿರುವೆ, ರಮಾನಂದ್. ಆ ಲಿಪಿಯನ್ನು ನೋಡಿದಾಗ ನನಗನ್ನಿಸಿತು. ಮೃತನಾದವನು ಗುಲಾಬ್ [illegible] ಎನ್ನುವ ಹೆಸರಿನವನೋ ಅವನು ಬೊಂಬಾಯಿಗೆ ಬಂದದ್ದು

ರಮಾನಂದನನ್ನು ನೋಡುವುದಕ್ಕಾಗಿ.' ರಮಾನಂದರಿಗೆ ಯಾವುದೋ ಮುಖ್ಯ ವಿಷಯವನ್ನು ತಿಳಿಸಲು ಅವನು ಆತುರನಾಗಿದ್ದ. ಅವನ ಸಂಗಡಿದ್ದವರು ಅದಕ್ಕೆ ಅಡ್ಡಿಯಾಗಿದ್ದರು. ಗುಲಾಬ್‌ಸಿಂಗ್ ರಮಾನಂದರನ್ನು ನೋಡದಂತೆ ತಡೆದಿಡಲು ಅವರು ಏನು ಮಾಡಲೂ ಸಿದ್ಧರಾಗಿದ್ದರು. ಕೊನೆಗೆ ತಮ್ಮ ಉದ್ದೇಶ ಈಡೇರುವುದಿಲ್ಲವೆಂದು ತಿಳಿದು ಕೊಲೆ ಮಾಡಿದರು."

"ಅವನು ನನಗೆ ತಿಳಿಸಲು ಅಪೇಕ್ಷಿಸಿದ ವಿಷಯವೇನೆಂಬುದನ್ನೇ ಹೇಳಲಿಲ್ಲ ನೀನು"

"ಅವಸರ ಬೀಳಬೇಡ, ರಮಾನಂದ್. ಯಥಾಕಾಲದಲ್ಲಿ ಎಲ್ಲವನ್ನೂ ಹೇಳುತ್ತೇನೆ. ಲಿಪಿಯನ್ನು ನೋಡಿದಾಗ ಅದರ ಅರ್ಥ ನನಗೆ ಸರಿಯಾಗಿ ತಿಳಿಯಲಿಲ್ಲ. ಆ ಮೇಲೆ ಪೋಲೀಸರು ಬಂದು ಮೃತನ ಜೇಬಿನಲ್ಲಿದ್ದ ವಸ್ತುಗಳನ್ನು ಹೊರಗೆ ತೆಗೆದಾಗ ಟಿಕೆಟ್ ಮತ್ತು ಐದು ರೂಪಾಯಿ ನೋಟುಗಳನ್ನು ನೋಡಿ ನನಗೆ ಅರ್ಥವಾಯಿತು."

"ನನ್ನನ್ನು ಪೀಡಿಸುವುದು ನಿನ್ನ ಉದ್ದೇಶ ಎಂತ ಕಾಣುತ್ತೆ"—ರಮಾನಂದ್ ಬೇಸರದಿಂದ ಹೇಳಿದ.

"ಪತ್ತೇದಾರನ ಮೆದುಳು, ತಲೆಯಲ್ಲಿರುವ ಯಂತ್ರ, ಯಾವ ರೀತಿ ಕೆಲಸ ಮಾಡುವುದೆಂಬುದನ್ನು ನಿನಗೆ ತಿಳಿಸುವುದು ನನ್ನ ಉದ್ದೇಶ. ನನ್ನ ಸಹವಾಸದಿಂದ ನಿನಗೆ ಅಷ್ಟಾದರೂ ಉಪಕಾರವಾಗಲಿ ಎಂದು. ನೋಟಿನ ಮೇಲೆ ರಾಜಕೋಟೆಯ ಬ್ಯಾಂಕೊಂದರ ಮುದ್ರೆಯಿತ್ತು. ಮುದ್ರೆಯ ಕೆಳಗೆ ಉರ್ದು ಲಿಪಿಯಲ್ಲಿ "ದಾಮು" ಎಂದು ಬರೆದಿತ್ತು"

ಈ ಮಾತುಗಳನ್ನು ಕೇಳಿ ಪ್ರಮೀಳಾ, ಬೆಚ್ಚಿದಳು. "ದಾಮು! ಚಂದ್ರಿಕಾ ಡಿಲ್ಲಿಯಿಂದ ನನ್ನ ಸಂಗಡ ಮಾತಾಡಿದಾಗ ಆ ಹೆಸರು ಹೇಳಿದ್ದಳು. ಅವನು ತನ್ನ ತಂದೆ ಕಿಷನ್‌ಚಂದರ ನಂಬಿಕಸ್ಥನಾದ ಸೇವಕ ಎಂದು ಅವಳು ಹೇಳಿದ್ದು. ಮೃತನು ದಾಮುವೇ ಆಗಿರಬಹುದೇ?"

"ಅದರಲ್ಲಿ ಸಂದೇಹವೇನು? ಅವನ ಜೇಬಿನಲ್ಲಿದ್ದ ಡಿಲ್ಲಿ ಬೊಂಬಾಯ್ ಫ್ರೈ ಟಿಕೆಟ್ ನೋಡಿದಾಗ ನನ್ನ ಅಭಿಪ್ರಾಯ ಸ್ಥಿರವಾಯಿತು. ಗುಲಾಬ್‌ಸಿಂಗ್

ವಿಮಾನದಲ್ಲಿ ಬೊಂಬಾಯಿಗೆ ಬಂದುದಾಗಿ ನಿನಗೆ ಹೇಳಿದ್ದು ನೆನಪಿರಬಹುದು. ಪ್ರಾತಃಕಾಲ ನಾವು ಕಛೇರಿಯನ್ನು ಬಿಡುವ ಮೊದಲು ನೀವು ಉಡುಪು ಹಾಕಿಕೊಳ್ಳುತ್ತಿದ್ದಾಗ ನಾನು ಏರ್‌ಪೋರ್ಟಿಗೆ ಟೆಲಿಫೋನ್ ಮಾಡಿದೆ. ನಿನ್ನೆ ಪ್ರಾತಃಕಾಲ ಡಿಲ್ಲಿಯಿಂದ ಬೊಂಬಾಯಿಗೆ ವಿಮಾನದಲ್ಲಿ ಪ್ರಯಾಣ ಮಾಡಿದವರ ಹೆಸರುಗಳನ್ನು ಕೇಳಿದೆ. ನಾನು ಪತ್ತೆದಾರನೆಂದು ತಿಳಿದಾಗ ಗುಮಾಸ್ತೆ ಪಟ್ಟಿಕೊಟ್ಟ. ಆ ವಿಮಾನದಲ್ಲಿ ಬಂದವರು ಮೂವರು ಮಾತ್ರ. ಅವರಲ್ಲಿ ಗುಲಾಬ್‌ಸಿಂಗನ ಹೆಸರಿಲ್ಲ. ಅವನು ಬೊಂಬಾಯಿಗೆ ಬಂದದ್ದು ರೈಲಲ್ಲಿ ಎಂಬುದು ಆ ಟಿಕೆಟ್ಟಿನಿಂದ ಖಂಡಿತವಾಯಿತು."

"ಹಾಗಾದರೆ ದಾದೂ ಬೇರೆ, ಗುಲಾಬ್‌ಸಿಂಗ್ ಬೇರೆ ಎಂದು ನಿನ್ನ ಅಭಿಪ್ರಾಯವೇ ?"

"ಹೌದು ಒಬ್ಬನು ಕೊಲೆಯಾದವನು. ಇನ್ನೊಬ್ಬನು ಅವನನ್ನು ಕೊಂದ ಕೊಲೆ ಗಡಕ."

ಸ್ಥಿರ ಕಂಠದಿಂದ ಗಂಭೀರವಾಗಿ ಕಾಮೇಶ್ ಈ ಮಾತುಗಳನ್ನು ಹೇಳಿದನು. ರಮಾನಂದ್ ಪ್ರಮೀಳಾ ಸ್ತಂಭಿತರಾದರು. ಕ್ಷಣಾಕಾಲಾನಂತರ ಕಾಮೇಶ್ ತನ್ನ ಮಾತುಗಳನ್ನು ಮುಂದುವರಿಸಿದನು.

"ಈಗ ಈ ಘಟನೆಗಳ ಬಗೆಗೆ ನನ್ನ ಅಭಿಮತವನ್ನು ತಿಳಿಸುತ್ತೇನೆ. ನಿರಾಶ್ರಿತರೆಂದು ಭಾರತಕ್ಕೆ ಬರುತ್ತಿರುವವರೆಲ್ಲ ನಿಜವಾಗಿ ನಿರಾಶ್ರಿತರಲ್ಲ. ಅವರಲ್ಲಿ ಕೆಲವರು ಪುಂಡು ಪೋಕರಿಗಳು, ವಂಚಕರು, ಗ್ಯಾಂಗ್‌ಸ್ಟರುಗಳು ಇದ್ದಾರೆ. ಅಂತಹ ಒಂದು ಗುಂಪಿನವರು ಕಿಷನ್‌ಚಂದರು ನಿಮ್ಮಲ್ಲಿ ಕೊಟ್ಟಿರುವ ರತ್ನಹಾರವನ್ನು ಅಪಹರಿಸಲು ಸಂಚು ಹೂಡಿದ್ದಾರೆ. ಗುಲಾಬ್‌ಸಿಂಗ್ ಈ ಸಂಚಿನಲ್ಲಿ ಸೇರಿದ್ದಾನೆ. ಡಿಲ್ಲಿಯಿಂದ ಪ್ರಮೀಳೆಗೆ ಫೋನ್ ಮಾಡಿದ ಹೆಂಗಸು ನಿಜವಾದ ಚಂದ್ರಲೇಖಾ ಅಲ್ಲ. ಗುಲಾಬ್‌ಸಿಂಗನ ಗುಂಪಿಗೆ ಸೇರಿದ ಹೆಂಗಸು. ಗುಲಾಬ್‌ಸಿಂಗ್ ರೈಲಲ್ಲಿ ಬೊಂಬಾಯಿಗೆ ಹೊರಟ ಮೇಲೆ ಅವನ ಕಡೆಯ ಆ ಹೆಂಗಸು ಚಂದ್ರಲೇಖಾ ಹೆಸರಿನಲ್ಲಿ ಫೋನ್ ಮಾಡಿದ್ದಾಳೆ. ಗುಲಾಬ್‌ಸಿಂಗ್ ಬೊಂಬಾಯಿಗೆ ಬಂದ ಮೇಲೆ ದಾದೂ ಇಲ್ಲಿರುವುದು

ಗೊತ್ತಾಗಿದೆ. ರಾಜಕೋಟೆಯಿಂದ ರಮಾನಂದರನ್ನು ನೋಡುವುದಕ್ಕಾಗಿಯೇ ದಾದು ಬಂದಿದ್ದಾನೆಂದು ಅವನಿಗೆ ತಿಳಿದಿದೆ. ದಾದು ಮತ್ತು ಗುಲ್ಹಾಬ್‌ಸಿಂಗ್ ಪರಸ್ಪರ ಪರಿಚಿತರಾಗಿರಬೇಕು. ರಮಾನಂದರನ್ನು ದಾದೂ ನೋಡದಂತೆ ತಡೆಯಲು ಪ್ರಯತ್ನಿಸಿ ಅದಕ್ಕಾಗಿಯೇ ಗುಲಾಬ್‌ಸಿಂಗ್ ಅವನನ್ನು ಕೊಲೆ ಮಾಡಿದ್ದಾನೆ. ಸಾಯುವ ಮುನ್ನ ದಾದು ತಾನು ರಮಾನಂದರಿಗೆ ತಿಳಿಸ ಬೇಕಾದ್ದನ್ನು “ ರಾಜಕೋಟ್–ಕಿ ” ಎಂಬ ಐದು ಅಕ್ಷರಗಳಿಂದ ತಿಳಿಸಿದ್ದಾನೆ. ಮುಂದೆ ಕಿಷನ್‌ಚಂದ್ ಎಂದು ಬರೆಯುವುದು ಅವನ ಉದ್ದೇಶವಾಗಿರಬೇಕು. ಅಷ್ಟರಲ್ಲಿ ಅವನ ಪ್ರಾಣ ವಾಯು ಹಾರಿ ಹೋದ್ದರಿಂದ ಬರವಣಿಗೆ ಅರ್ಧದಲ್ಲಿ ನಿಂತಿತು.”

“ ಹಾಗಾದರೆ ಕಿಷನ್‌ಚಂದ್ ಸತ್ತನೆಂದು ಚಂದ್ರಲೇಖಾ ಹೇಳಿದ್ದು ಸುಳ್ಳೆ ?”

“ ಚಂದ್ರಲೇಖಾ ಯಾರೆಂಬ ವಿಚಾರ ಸಂದೇಹಗ್ರಸ್ತವಾಗಿರುವಾಗ ಅವಳು ಹೇಳಿದ್ದನ್ನು ಹೇಗೆ ನಂಬುವುದು ? ಕಿಷನ್‌ಚಂದ್ ಜೀವಂತನಾಗಿರಬೇಕೆಂದು ನನ್ನ ವಿಶ್ವಾಸ. ಕರಾಚಿಯಿಂದ ಹೇಗೋ ತಪ್ಪಿಸಿಕೊಂಡು ರಾಜಕೋಟೆಗೆ ಬಂದಿರಬೇಕು. ಪಾಕಿಸ್ಥಾನದ ದಕ್ಷಿಣ ಗಡಿಯೆಲ್ಲ ನಿರ್ಜಲ ಮರುಭೂಮಿ. ಒಂಟೆಗಳ ಸಹಾಯದಿಂದ ದಾಟುವುದು ಸಾಧ್ಯ. ಕಿಷನ್‌ಚಂದ್ ರಾಜಕೋಟೆಗೆ ಬಂದು ಏನೋ ತೊಂದರೆಗೆ ಸಿಕ್ಕಿದ್ದಾನೆ. ನಂಬಿಕಸ್ಥನಾದ ಸೇವಕ ದಾದೂ ಸಂಗಡ ನಿನಗೆ ಸುದ್ದಿ ಕಳುಹಿಸಿದ್ದಾನೆ. ಈ ಸಂದರ್ಭದಲ್ಲಿ ನೀನು ಏನು ಮಾಡಬೇಕೆಂದಿರುವೆ, ರಮಾನಂದ್ ?”

ರಮಾನಂದ್ ಕೂಡಲೆ ಉತ್ತರ ಕೊಡಲಿಲ್ಲ. ಸ್ವಲ್ಪ ಹೊತ್ತು ಯೋಚಿಸಿ ಬಳಿಕ “ ನಿನ್ನ ಸಲಹೆಯೇನು ?” ಎಂದು ಕೇಳಿದ.

“ ತಂದೆ ರಾಜಕೋಟೆಯಲ್ಲಿದ್ದಾನೆ. ಮಗಳ ಗತಿ ಯೇನಾಯಿತೆಂಬುದು ಸರಿಯಾಗಿ ತಿಳಿದಿಲ್ಲ. ತಂದೆಯನ್ನು ನೋಡಿದರೆ ತಿಳಿಯಬಹುದು. ನೀನು ಇಷ್ಟು ವರ್ಷವೂ ಅವರ ವಕೀಲನಾಗಿದ್ದು ಆಪತ್ಕಾಲದಲ್ಲಿ ಸಹಾಯಕ್ಕೆ ಹೋಗ ದಿರುವುದು ಧರ್ಮವೇ ? ಯೋಚಿಸಿ ನೋಡು.”

"ನಾನು ಹೋಗುವುದಾದರೆ ನೀನೂ ಸಂಗಡ ಬರುವೆಯಾ ?" ಎಂದು ರಮಾನಂದ್ ಪ್ರಶ್ನಿಸಿದ.

"ಅದನ್ನು ಕೇಳಬೇಕೇ, ರಮಾನಂದ್. ತನ್ನ ಸಾಹಸ ಪ್ರತಾಪಗಳನ್ನು ಪ್ರಕಾಶ ಪಡಿಸುವ ಅವಕಾಶ ದೊರಕಿರುವಾಗ ಕಾಮೇಶ್ ಸುಮ್ಮನಿರುವನೇ ? ಜಗತ್ತಿನ ಕೊನೆಯ ತನಕ ಹೋಗಲು ಸಿದ್ಧ."

"ಹಾಗಾದರೆ ನಾಳೆ ಹೋಗೋಣ."

"ಈ ದಿನವೇ ಏಕಾಗಬಾರದು ? ಕಿಷನ್‌ಚಂದ್ ಘೋರ ವಿಪತ್ತಿನಲ್ಲಿರ ಬಹುದು. ಅವನ ರಕ್ಷಣೆಯ ದೃಷ್ಟಿಯಿಂದ ಒಂದೊಂದು ಗಂಟೆಯೂ ಅಮೂಲ್ಯ."

"ಕೋರ್ಟಿನ ತೊಂದರೆಯೇನೂ ಇಲ್ಲ. ಆದರೆ ಕಛೇರಿಯ ವ್ಯವಹಾರ ಗಳನ್ನು ಸರಿಪಡಿಸಿ ಹೋಗಬೇಡವೇ ?"

"ಪ್ರಮೀಳಾ ಅದನ್ನು ನೋಡಿಕೊಳ್ಳುವಳು."

"ಪ್ರಮೀಳಾ ನೋಡಿಕೊಳ್ಳುವುದಿಲ್ಲ. ಅವಳು ನಾಳೆಯಿಂದ ಒಂದ ತಿಂಗಳು ರಜಾ ತೆಗೆದುಕೊಂಡು ಮದ್ರಾಸಿಗೆ ಹೋಗುತ್ತಾಳೆ."

ಪ್ರಮೀಳೆಯ ಬಿರುದನಿ ಪುರುಷರಿಬ್ಬರನ್ನೂ ಚಕಿತಗೊಳಿಸಿತು. "ಈ ಹಠಾತ್ ನಿರ್ಧಾರದ ಅರ್ಥವೇನು, ಡಿಯರ್ ?" ಕಾಮೇಶ್ ಅನುನಯದ ದನಿಯಿಂದ ಪ್ರಶ್ನಿಸಿದ.

"ಈ ಸೆಕ್ರೆಟರಿ ಕೆಲಸ ನನಗೆ ಸಾಕಾಗಿದೆ. ಸಿನಿಮಾ ನಟಿಯ ಕೆಲಸ ಸಿಕ್ಕುತ್ತೇನೋ ಹೋಗಿ ನೋಡುತ್ತೇನೆ."

"ನೀನೂ ನಮ್ಮ ಸಂಗಡ ರಾಜಕೋಟೆಗೆ ಬರಬೇಕು. ಅಲ್ಲಿಂದ ಹಿಂದಿರುಗಿದ ಮೇಲೆ ಯೋಚಿಸಬಹುದು."

ಪ್ರಮೀಳಾ ಏಕಾಏಕಿ ಒಪ್ಪಿಕೊಳ್ಳಕೊಳ್ಳಲಿಲ್ಲ. ರಮಾನಂದ್ ಕಾಮೇಶ ಚೌದರಿ ಒಂದೆರಡು ಸಾರಿ ಹೇಳಿದ ಮೇಲೆ ಒಪ್ಪಿಕೊಂಡಳು.

ಆ ದಿನ ರಾತ್ರಿಯೇ ಅಹಮದಾಬಾದ್ ಮುಖಾಂತರ ರಾಜಕೋಟೆಗೆ ಹೋಗಬೇಕಾಗಿ ನಿಶ್ಚಯವಾಯಿತು. ಅದರಂತೆ ಕಾಮೇಶ್ ಟಿಕೆಟುಗಳನ್ನು ತರಿಸಿ ಸ್ಥಳಗಳನ್ನು ರಿಸರ್ವ ಮಾಡಿಸಿದ.



# ಆರನೆಯ ಪರಿಚ್ಛೇದ

ನಾವು ಹಿಂದೆ ಸೂಚಿಸಿದಂತೆ ರಮಾನಂದ್, ಕಾಮೇಶ ಚೌದುರಿ ಮತ್ತು ಪ್ರಮೀಳಾ ಆ ದಿನ ರಾತ್ರಿಯೇ ರಾಜಪುರಾಣಾ ಮೈಲಿನಲ್ಲಿ ಬೊಂಬಾಯ್ ಬಿಟ್ಟು ಮರುದಿನ ಪ್ರಾತಃಕಾಲ ಅಹಮದಾಬಾದ್ ತಲಪಿದರು. ಅಲ್ಲಿ ಅವರು ರಾಜಕೋಟೆಗೆ ಜೇರೆ ರೈಲ್ ಹತ್ತಬೇಕಾಗಿತ್ತು.

ರೆಫ್ರೆಷ್‌ಮೆಂಟ್ ರೂಮಿನಲ್ಲಿ ಮೂವರೂ ಉಪಹಾರ ತೆಗೆದುಕೊಳ್ಳುತ್ತಿದ್ದಾಗ ಕಾಮೇಶನಿಗೆ ಪರಿಚಿತನಾದ ಒಬ್ಬ ಪೋಲೀಸ್ ಅಧಿಕಾರಿ ಅಲ್ಲಿಗೆ ಬಂದನು. ಪರಸ್ಪರ ಪ್ರಶ್ನೋತ್ತರಗಳಾದ ಮೇಲೆ ಪೋಲೀಸ್ ಅಧಿಕಾರಿ "ಎಲ್ಲಿಯವರೆಗೆ ಪ್ರಯಾಣ, ಕಾಮೇಶ್? ನಿನ್ನ ಕೆಲಸದಲ್ಲಿ ನನ್ನಿಂದೇನಾದರೂ ಸಹಾಯಬೇಕೆ?

"ಲೊಕೇಷನ್ ಹುಡುಕಲು ರಾಜಪುರಾಣಕ್ಕೆ ಹೋಗುತ್ತಿದ್ದೇನೆ."

ಎಂದು ಕಾಮೇಶ ಉತ್ತರ ಕೊಟ್ಟನು. ಅವನು ರಮಾನಂದ್ ಮತ್ತು ಪ್ರಮೀಳೆಯ ಕಡೆ ಬೀರಿದ ದೃಷ್ಟಿ ಅರ್ಥಗರ್ಭಿತವಾಗಿತ್ತು.

"ಲೊಕೇಷನ್! ಏನು ನೀನು ಹೇಳುವುದು?"—ಪೋಲೀಸ್ ಅಧಿಕಾರಿ ಆಶ್ಚರ್ಯದಿಂದ ಪ್ರಶ್ನಿಸಿದ.

“ಹೌದು. ನಿನಗೆ ತಿಳಿಯದೇನು ? ಈಗ ನಾನೊಬ್ಬ ಫಿಲ್ಮ್ ಡೈರಕ್ಟರ್. ಒಂದು ರಜಪುತ್ ಚಿತ್ರ ತೆಗೆಯುತ್ತಿದ್ದೇನೆ. ಅದಕ್ಕೊಂದು ಸಣ್ಣ ಅರಮನೆ, ಸೈನಿಕ ದಳ, ಆನೆ ಕುದುರೆಗಳು ಬೇಕಾಗಿವೆ. ಇವರೇ ನಮ್ಮ ಪ್ರಡ್ಯೂಸರ್ ರಮಾನಂದ ಸೇಟ್, ಈಕೆ ನಮ್ಮ ಪ್ರಧಾನ ನಟಿ ಪ್ರಮೀಳಾ ಚೌದುರಿ, ಇವರು ನನ್ನ ಆಪ್ತ ಮಿತ್ರರು ಮನೋಹರ ಕೌಲ್, ಮಧ್ಯ ಪ್ರದೇಶದಲ್ಲಿ ಪೋಲೀಸ್ ಅಧಿಕಾರಿ.”

ಪರಸ್ಪರ ವಂದನೆ ಪ್ರತಿ ವಂದನೆಗಳು ಮುಗಿದ ಮೇಲೆ ಕೌಲ್ ಹೇಳಿದನು.

“ಸರ್ಕಾರಿ ಕೆಲಸದ ಮೇಲೆ ಅಹಮದಾಬಾದಿಗೆ ಬಂದಿದ್ದೆ. ಈ ದಿನವೇ ಡಿಲ್ಲಿಗೆ ಹೋಗುತ್ತೇನೆ. ಅಲ್ಲಿ ಎರಡು ವಾರ ಇರಬೇಕಾಗುತ್ತದೆ. ನೀನು ಲೋಕೇಷನ್ ನೋಡಿಕೊಂಡು ಡಿಲ್ಲಿಗೆ ಬಂದರೆ ಸಂಸ್ಥಾನ ಶಾಖೆಯ ಮುಖಾಂತರ ಸಹಾಯ ಮಾಡಿಸಿ ಕೊಡುತ್ತೇನೆ.”

“ಒಂದು ಕಪ್ ಕಾಪಿಯಾದರೂ ತೆಗೆದುಕೊಂಡು ಹೋಗಿ ಮಿಸ್ಟರ್ ಕೌಲ್ ”—ಪ್ರಧಾನ ನಟಿಗೆ ಉಚಿತವಾದ ಮಿದು ನಗೆ ಕಟಾಕ್ಷಗಳನ್ನು ಬೀರಿ ಪ್ರಮೀಳಾ ಹೇಳಿದಳು.

“ಕ್ಷಮಿಸಿ. ಕಾಪಿ ಉಪಹಾರ ಮುಗಿಸಿಕೊಂಡು ಹೋಗುತ್ತಿದ್ದಾಗ ನಿಮ್ಮನ್ನು ನೋಡಿದೆ. ಟ್ರೈನಿಗೆ ಹೊತ್ತಾಗುತ್ತ ಬಂತು. ನೀವು ಡಿಲ್ಲಿಗೆ ಬಂದಾಗ ನನ್ನ ಅತಿಥಿಗಳಾಗಬೇಕು. ನನ್ನ ಅಡ್ರೆಸ್–ಎಂಬಸಿ ಹೋಟೆಲ್, ಕನ್ನಾಟ್ ಸರ್ಕಸ್ ”

ಎಂದು ಹೇಳಿ ಕೌಲ್ ಮೊದಲಿನ ಎರಡರಷ್ಟು ಶೀಘ್ರದಿಂದ ನೂತನ ಪರಿಚಿತರಿಗೆ ವಂದಿಸಿ, ಕಾಮೇಶನ ಕೈಕುಲುಕಿ ಹೊರಟು ಹೋದ. ಬಾಗಿಲಿಂದ ಅವನು ಕಣ್ಮರೆಯಾಗುತ್ತಲೆ ರಮಾನಂದ‘ “ಈ ಹುಡುಗಾಟಗಳನ್ನು ನೀನು ನಿಲ್ಲಿಸದೆ ಹೋದರೆ ನಾನು ಇಲ್ಲಿಂದಲೆ ಬೊಂಬಾಯಿಗೆ ಹಿಂದಿರುಗುತ್ತೇನೆ, ಕಾಮೇಶ್. ನಾನೊಬ್ಬ ಗೌರವಸ್ಥ ಬ್ಯಾರಿಸ್ಟರ್, ನನಗೂ ಹೆಂಡತಿ ಮಕ್ಕಳು ಇದ್ದಾರೆ ಎಂಬುದನ್ನು ನೀನು ನೆನಪಿನಲ್ಲಟ್ಟುಕೊಂಡು ಮಾತಾಡಿದರೆ ಒಳ್ಳೆಯದು ” ಎಂದು ಗಂಭೀರವಾಗಿ ನುಡಿದ.

"ಫಿಲ್ಮ್ ಪ್ರಡ್ಯೂಸರ್ ಎಂದರೆ ಬ್ಯಾರಿಸ್ಟರಿಗಿಂತ ಕಡಿಮೆಯೇನಲ್ಲ ರಮಾನಂದ್. ಪ್ರಧಾನ ನಟ ಎಂದ ಕೂಡಲೆ ಕೌಲನ ಕಣ್ಣುಗಳು ಹೇಗೆ ಅರಳಿದವು ನೋಡಿದೆಯಾ? ಈಗಿನ ಅಧಿಕಾರಿಗಳ ದೃಷ್ಟಿಯಲ್ಲಿ ಎರಡು ವರ್ಗದ ಜನರು ಮಾತ್ರವೇ ಗೌರವಕ್ಕೆ ಅರ್ಹರು. ಮೊದಲನೆಯ ವರ್ಗ ಕಾಂಗ್ರೆಸ್ ಮಂತ್ರಿಗಳು, ಎರಡನೆ ವರ್ಗ ಸಿನಿಮಾ ನಟ ನಟಿಯರು. ಉಳಿದವರೆಲ್ಲ ಕಾನೂನು ಬದ್ಧರಾಗಿ ತೆರಿಗೆಗಳನ್ನು ಕೊಡುತ್ತಾ ಕುರಿಗಳಂತೆ ತಲೆ ತಗ್ಗಿಸಿ ಕೊಂಡು ಮುಂದೆ ಮುಂದೆಯಾಗಿ ಚಲಿಸುವ ಸಾಮಾನ್ಯ ಯಃಕಶ್ಚಿತ್ ಮಾನವ ಜೀವಿಗಳು. ಅದರಲ್ಲಿಯೂ ಸಿನಿಮಾ ನಟರ ಸ್ಥಾನ ಕಾಂಗ್ರೆಸ್ ಮಂತ್ರಿಗಳಿಗಿಂತ ಒಂದು ಮೆಟ್ಟಲು ಮೇಲೆ, ಮೊನ್ನೆ ಇಂಗ್ಲೆಂಡಿಂದ ಸಾಬು ಬಂದಿದ್ದಾಗ ರಾಜಸ್ಥಾನದ ವಿಖ್ಯಾತ ಪ್ರಾಚೀನ ವಂಶಗಳ ಆಧುನಿಕ ಪ್ರತಿನಿಧಿಗಳು ಮಂತ್ರಿಗಳು ಪಾರ್ಟಿ ಕೊಡಲು, ಸಂತೋಷ ಕೂಟಗಳನ್ನೇರ್ಪಡಿಸಲು ನಾ ಮುಂದು ತಾ ಮುಂದು ಎಂದು ಬಂದದ್ದನ್ನು ಪತ್ರಿಕೆಗಳಲ್ಲಿ ಓದಲಿಲ್ಲವೆ?"

"ನಾವು ರಾಜಕೋಟೆಗೆ ಹೋಗುತ್ತಿರುವುದು ಪಾರ್ಟಿಗಳಲ್ಲಿ ಭಾಗವಹಿಸುವುದಕ್ಕಲ್ಲ. ಆಪತ್ತಿನಲ್ಲಿ ಬಿದ್ದಿರುವ ಕಕ್ಷಿಗಾರನೊಬ್ಬನ ರಕ್ಷಣೆಗಾಗಿ."

"ಆಪದ್ಬಾಂಧವ ಬಿರುದು ಗಳಿಸುವುದರಲ್ಲಿ ನಾವು ಕೂಡಾ ಆಪತ್ತಿನ ಸುಳಿವು ಕಾಣುವ ಮೊದಲೇ ಆಪತ್ತಿನಲ್ಲಿ ಬಿದ್ದು ಬಿಡಬೇಕೇ? ಅದು ನನಗೆ ಸಮ್ಮತವಿಲ್ಲ. ರಾಜಕೋಟೆ ತಲಪಿದ ಮೇಲೆ ಆಪತ್ತಿನ ಪರಂಪರೆಯೇ ಕಾದಿದೆ ನಮಗಾಗಿ."

"ರಾಜಕೋಟೆಗೆ ಹೋಗಿ ನಾವೇನು ಮಾಡಬೇಕು! ಪೋಲೀಸ್ ಸೂಪರಿಂಡೆಂಟರನ್ನು ನೋಡುವುದೇ?"

"ನಮ್ಮ ಪ್ರವಾಸದ ಉದ್ದೇಶವನ್ನೇ ಹಾಳು ಮಾಡುವುದು ನಿನ್ನ ಇಚ್ಛೆಯಾದರೆ ಹಾಗೆ ಮಾಡಬಹುದು."

"ಪೋಲೀಸರ ಸಹಾಯ ಪಡೆಯದೆ ನಾವು ಕಿಷನ್‌ಚಂದನನ್ನು ಪತ್ತೆ ಮಾಡುವುದು ಹೇಗೆ?"

"ಶಿಕಾರಿಪುರದ ಗಲಭೆಯಲ್ಲಿ ಕಿಷನ್‌ಚಂದ್ ಸತ್ತನೆಂದು ಪತ್ರಿಕೆಗಳಲ್ಲಿ ವರದಿಯಾಗಿದೆ. ರಾಜಕೋಟೆಯಲ್ಲಿ ಅವನನ್ನು ಸೆರೆಯಲ್ಲಿಟ್ಟಿರುವ ಕಳ್ಳರ ಕೂಟ

ಆ ವರದಿ ಪೋಲೀಸರ ಗಮನಕ್ಕೆ ಬರುವಂತೆ ಮೊದಲೆ ಏರ್ಪಡಿಸಿರುತ್ತಾರೆ. ಪೋಲೀಸ್ ಸೂಪರಿಂಡೆಂಟರ ಹತ್ತಿರ ನಾವು ಕಿಷನ್‌ಚಂದನ ವಿಚಾರ ಹೇಳಿದರೆ ಸಹಾಯ ದೊರಕುವುದಿರಲಿ, ನಮ್ಮ ಕೆಲಸಕ್ಕೆ ತೊಂದರೆಯಾಗುವುದಲ್ಲದೆ ಕಿಷನ್‌ಚಂದನ ಕಷ್ಟವೂ ಹೆಚ್ಚುತ್ತದೆ."

" ಹಾಗಾದರೆ ಏನು ಮಾಡಬೇಕೆಂದು ನೀನು ಹೇಳುವುದು ?"

" ನಾವು ರಾಜಕೋಟೆ ತಲಪುವವರೆಗೆ ಪ್ರಾಣಗಳನ್ನ ಬಿಗಿ ಹಿಡಿದು ಕೊಂಡು ಸುಮ್ಮನಿರು."

ಕಾಮೇಶನ ಸಲಹೆ ರಮಾನಂದನಿಗೆ ಸೂಕ್ತವಾಗಿ ತೋರಿತು. ಸರಿಯಾದ ರುಜುವಾತು ಆಧಾರಗಳಿಲ್ಲದೆ ಪೋಲೀಸರ ಸಹಾಯ ಕೇಳುವುದು ಅನುಚಿತ. ರಾಜಕೋಟೆಯಲ್ಲಿ ಕರಾಚಿಯ ನಿರಾಶ್ರಿತರು ಯಾರಾದರೂ ಇರುವರೇ ಎಂಬು ವನ್ನು ಮೊದಲು ವಿಚಾರಿಸಿಕೊಳ್ಳಬೇಕು. ಅವರಲ್ಲಿ ಯಾರಾದರೂ ಕಿಷನ್‌ಚಂದನ ವಿಚಾರ ತಿಳಿದಿರಬಹುದು. —ಎಂದು ಮುಂತಾಗಿ ಯೋಚಿಸುತ್ತ ರಮಾನಂದ್ ಆ ದಿನದಲ್ಲಿ ಬಹು ಭಾಗವನ್ನು ಕಳೆದನು. ಸಂಜೆ ರಾಜಕೋಟೆ ತಲಪುವವರೆಗೆ ಪ್ರಮೀಳಾ ಕಾಮೇಶರ ಮಧ್ಯೆ ನಡೆಯುತ್ತಿದ್ದ ನಿರರ್ಗಳವಾದ ಸಂವಾದದಲ್ಲಿ ಅವನು ಭಾಗ ವಹಿಸಲಿಲ್ಲ.

ರಾಜಕೋಟ್ ಸೌರಾಷ್ಟ್ರದಲ್ಲಿ ದೊಡ್ಡ ನಗರ, ವಾಣಿಜ್ಯ ಕೇಂದ್ರ. ಭಾರಿ ಕಟ್ಟಡಗಳು ಅಂಗಡಿ ಮುಂಗಟ್ಟುಗಳು ನಗರದಲ್ಲೆಲ್ಲ ತುಂಬಿದ್ದವು. ನಗರದ ಪಾರ್ಶ್ವದಲ್ಲಿ ಬೆಳೆಯುತ್ತಿದ್ದ ಹೊಸ ವಿಸ್ತರಣದ ಮಧ್ಯೆ ಭವ್ಯವಾದ ಕಟ್ಟಡದಲ್ಲಿದ್ದ ಸುಖ ನಿವಾಸ್ ಹೋಟಲಿನಲ್ಲಿ ಮೂರು ಮಲಗುವ ಕೋಣೆಗಳಿದ್ದ ಕೆಳ ಅಂತಸ್ತಿನ ಸೂಟೊಂದನ್ನು ದಿನಕ್ಕೆ ಮೂವತ್ತು ರೂಪಾಯಿ ಬಾಡಿಗೆ ಯಂತೆ, ಕಾಮೇಶ್ ಗೊತ್ತು ಮಾಡಿದ.

" ರೂಮುಗಳು ಎರಡನೆಯ ಅಂತಸ್ತಿನಲ್ಲಿದ್ದಿದ್ದರೆ ಚೆನ್ನಾಗಿತ್ತು " ಎಂದು ರಮಾನಂದ್ ಹೇಳಿದಾಗ ಕಾಮೇಶ್ " ಈ ಸೂಟ್ ಪ್ರತ್ಯೇಕವಾಗಿದೆ. ನಮ್ಮ ಇಷ್ಟದಂತೆ ಬಂದು ಹೋಗಬಹುದು. ಅದರ ಅನುಕೂಲ ನಿನಗೆ ಮುಂದೆ ಗೊತ್ತಾಗುತ್ತೆ " ಎಂದು ಕಾಮೇಶ್ ಉತ್ತರ ಕೊಟ್ಟ.

ಆ ದಿನ ರಾತ್ರಿ ಸುಮಾರು ೧೦ ಗಂಟೆ. ರಮಾನಂದ್, ಕಾಮೇಶ್ ಮತ್ತು ಪ್ರಮೀಳಾ ಸ್ನಾನಮಾಡಿ ಪ್ರವಾಸದ ಪರಿಶ್ರಮವನ್ನು ಪರಿಹರಿಸಿಕೊಂಡು ಊಟಮಾಡಿ ನಗರದ ಕಡೆ ತಿರುಗಾಡಿ ಬರಲು ಹೋಗುತ್ತಿದ್ದರು. ಉದ್ದೇಶ ರಹಿತವಾದ ಉತ್ಸಾಹದಿಂದ ಕಾಮೇಶ್ ಕಳೆಯೇರಿದ್ದ. ಇಷ್ಟು ದಿನಗಳ ಮೇಲೆ ಪುನಃ ಕಾಮೇಶನ ಪಾರ್ಶ್ವದಲ್ಲಿ "ವಾಕ್" ಹೋಗುವ ಅವಕಾಶ ದೊರಕಿತೆಂದು ಪ್ರಮೀಳಾ ಹರ್ಷಗೊಂಡಿದ್ದಳು. ರಮಾನಂದ್ ಮಾತ್ರ ಚಿಂತಾಮಗ್ನನಾಗಿ "ಒಂದು ದಿನ, ಇಪ್ಪತ್ತುನಾಲ್ಕು ಗಂಟೆ ವ್ಯರ್ಥವಾಗಿ ಕಳೆದು ಹೋಯಿತು. ಕಿಷನ್‌ಚಂದನ ಸುಳಿವೂ ನಮಗೆ ಗೊತ್ತಾಗಿಲ್ಲ. ಕೆಲಸ ಕಾರ್ಯಗಳನ್ನು ಬಿಟ್ಟು ಬಿಸಿಲು ಕುದುರೆಯನ್ನು ಹುಡುಕುತ್ತಾ ನಾವಿಲ್ಲಿ ಬಂದ ಹಾಗಾಯಿತು" ಎಂದು ಯೋಚಿಸುತ್ತಿದ್ದ. ಅವನ ನಿರಾಶಾಭಾವನೆ ಪ್ರಮೀಳಾ ಕಾಮೇಶರ ಆನಂದದ ಮೇಲೆ ಕಾಳಿಕೆಯ ತೆರೆಯೊಂದನ್ನು ಕಟ್ಟಿದಂತಾಗಿತ್ತು. ಆಗ ಅವರ ವಿಧಿ, ಹೊತ್ತು ಮೀರಿ ಮನೆಗೆ ಹಿಂದಿರುಗುತ್ತಿದ್ದ ಸಾಮಾನ್ಯ ನಾಗರಿಕನೊಬ್ಬನ ರೂಪದಲ್ಲಿ ಎದುರಿಗೆ ಕಾಣಿಸಿಕೊಂಡಿತು.

ಹೋಟಲಿದ್ದ ಸ್ಥಳಕ್ಕೂ ನಗರಕ್ಕೂ ಮಧ್ಯೆ ಒಂದು ಹಳ್ಳ. ಮಳೆಗಾಲದಲ್ಲಿ ಒಂದೊಂದು ಸಾರಿ ಪ್ರವಾಹವೂ ಬರುತ್ತಿತ್ತು. ಕಾರಣ ಅದಕ್ಕೊಂದು ಸೇತುವೆ ಕಟ್ಟಲ್ಪಟ್ಟಿತ್ತು. ಸೇತುವೆ ದಾಟಿಯೇ ನಗರಕ್ಕೆ ಹೋಗಬೇಕು. ನಮ್ಮ ಮೂವರು ಗೆಳೆಯ ಗೆಳತಿಯರು ಸೇತುವೆಯ ಹತ್ತಿರ ಬಂದಾಗ ನಗರದ ಕಡೆಯಿಂದ ನಾಗರಿಕನೊಬ್ಬನು ಎದುರಿಗೆ ಬರುತ್ತಿದ್ದನು. ಅವನ ಹೊರತಾಗಿ ಸೇತುವೆ ನಿರ್ಜನ. ನರಪ್ರಾಣಿಯೂ ಇಲ್ಲ. ನಾಗರಿಕನ ಕೈಯಲ್ಲಿ ಪ್ರವಾಸಿ ಏಜೆಂಟರು ಉಪಯೋಗಿಸುವಂತಹ ಒಂದು ಸಣ್ಣ ಸೂಟ್‌ಕೇಸ್. ಪ್ರಾಯಶಃ ಅವನ ವಾಣಿಜ್ಯ ವಸ್ತುಗಳ ಮಾದರಿಗಳಿಂದ ತುಂಬಿರಬಹುದು. ಕಾನೂನು ಅನುಸರಿಸಿ ನಾಗರಿಕನು ರಸ್ತೆ ಪಾರ್ಶ್ವದ ಕಾಲು ಹಾದಿಯ ಮೇಲೆ ನಡೆದು ಬರುತ್ತಿದ್ದನು. ಅವನು ಸೇತುವೆಯ ಮಧ್ಯಕ್ಕೆ ಬಂದಿರಬಹುದು. ಆಗ ಹಠಾತ್ತಾಗಿ ಸೇತುವೆಯ ಪಕ್ಕದಿಂದ ಮೂವರು ಹಾರಿ ಬಿದ್ದು ನಾಗರಿಕನನ್ನು ಆಕ್ರಮಣ ಮಾಡಿದರು. ನಾಗರಿಕನು ಕೆಳಗುರುಳಿದನು. ಆಗಂತುಕರು ಅವನ ಮೇಲೆ ಬಿದ್ದು ಹೊಡೆಯುತ್ತಾ ಕೈಯಿಂದ ಸೂಟ್ ಕೇಸನ್ನು ಕಿತ್ತು ಕೊಳ್ಳಲು ಪ್ರಯತ್ನಿಸುತ್ತಿದ್ದಂತೆ ನಮ್ಮ ಗೆಳೆಯರು ಅಲ್ಲಿಗೆ ಬಂದರು. ರಮಾನಂದ್

ದೃಶ್ಯವನ್ನು ನೋಡಿ ಸ್ತಂಭಿತನಾದ. ಕಾಮೇಶ್ ರಸ್ತೆಯ ಎರಡೂ ಕಡೆ ದೃಷ್ಟಿ ಬೀರಿ ಏನು ಮಾಡಬೇಕೆಂದು ಯೋಚಿಸುತ್ತ ನಿಂತ. ಪ್ರಮೀಳಾ ಕೂಗಿಕೊಳ್ಳುವ ಪ್ರವೃತ್ತಿವನ್ನು ತಡೆಗಟ್ಟಲು ಪ್ರಯತ್ನಿಸುತ್ತಿದ್ದಳು.

"ನಾವು ನೋಡುತ್ತ ಸುಮ್ಮನಿರಬೇಕೇ ?"

ರಮಾನಂದ್ ಪ್ರಶ್ನಿಸಿದ. ಬೀದಿಯಲ್ಲಿ ಹೋಗುವ ಈ ಮಾರಿಯನ್ನು ಮನೆಗೆ ತಂದುಕೊಳ್ಳುವುದರಿಂದ ಉದ್ಭವಿಸಬಹುದಾದ ಕಾನೂನಿನ ತೊಡರುಗಳನ್ನು ಅವನು ಚಿಂತಿಸುತ್ತಿದ್ದ.

"ಸುಮ್ಮನಿರದೆ ಏನು ಮಾಡುವುದು? ಅದು ನಮಗೆ ಸಂಬಂಧಿಸಿದ ವಿಷಯವಲ್ಲ"—ಕಾಮೇಶನ ದನಿಯಲ್ಲಿ ನಗುವಿನ ನೆರಳು ಕಂಡೂ ಕಾಣದಂತಿತ್ತು.

"ಸಾಧ್ಯವಲ್ಲ"—ಎಂದು ರಮಾನಂದ್ ನಾಗರಿಕನನ್ನು ದಾಳಿಕಾರರಿಂದ ರಕ್ಷಿಸಲು ಮುಂದೆ ಸುಗ್ಗಿದ. ಕಾಮೇಶ್ ಮಾತಾಡಲಿಲ್ಲ. ಸರಿದು ನಿಲ್ಲುವಂತೆ ಕೈಯಿಂದ ಪ್ರಮೀಳೆಗೆ ಸನ್ನೆಮಾಡಿ ಬೇಟೆಯನ್ನು ಕಂಡು ಕುಪ್ಪಳಿಸುವ ಹೆಬ್ಬುಲಿಯಂತೆ ನಿಂತಿದ್ದಂತೆಯೇ ಸೇತುವೆಯ ಪಾರ್ಶ್ವಕ್ಕೆ ಹಾರಿದ. ರಮಾನಂದ್ ಸೇತುವೆಯ ಹತ್ತಿರ ಬರುವಷ್ಟರಲ್ಲಿ ಮೂವರು ದಾಳಿಕಾರರಲ್ಲಿ ಒಬ್ಬನು ಕಾಮೇಶ್ ಹಾರಿ ಬಂದ ವೇಗಕ್ಕೆ ಸೇತುವೆಯ ಆ ಕಡೆ ಬಿದ್ದಿದ್ದ. ಮತ್ತೊಬ್ಬನು ಕೆಳಗುರುಳಿದ. ಮೂರನೆಯವನ ಸಂಗಡ ಕಾಮೇಶ್ ಸೆಣಸುತ್ತಿದ್ದ.

ಅದು ಕತ್ತಲೆಯ ರಾತ್ರಿ. ಸೇತುವೆಯ ಮೇಲಿನ ದೀಪಗಳು ದೂರ ದೂರಕ್ಕಿದ್ದದ್ದರಿಂದ ಸಾಕಾದಷ್ಟು ಬೆಳಕಿರಲಿಲ್ಲ. ಕಾಮೇಶ್ ತನ್ನೊಡನೆ ಸೆಣಸುತ್ತಿದ್ದ ದಾಳಿಕಾರನ ಮುಖವನ್ನು ಕ್ಷಣಕಾಲ ದಿಟ್ಟಿಸಿ ನೋಡಿದ. ಅವನು ಜಾತಿಯಲ್ಲಿ ಮುಸಲ್ಮಾನನೆಂದು ತಿಳಿಯಲು ಹೆಚ್ಚು ಹೊತ್ತಾಗಲಿಲ್ಲ. ಕಾಮೇಶನಿಗೆ ಬೊಂಬಾಯಿನ ಕಳ್ಳಕಾಕರ ಪರಿಚಯ ಚೆನ್ನಾಗಿತ್ತು. ಅವರಲ್ಲಿ ಕೂಡಾ ಇಂತಹ ಕೆಟ್ಟ ಚಹರೆಯ ಮನುಷ್ಯನನ್ನು ಅವನು ಇದುವರೆಗೆ ನೋಡಿರಲಿಲ್ಲ. ಕಾದ ಕಬ್ಬಿಣದ ಮೇಲೆ ಬಿದ್ದ ನೀರಿನ ಹನಿಯಂತೆ ಅವನ ಕೋಪ ಸುಯೆದಿತು. ಮುಷ್ಟಿಯಿಂದ ಮೂಗಿನ ಮೇಲೆ ಬಲವಾಗಿ ಹೊಡೆದ.

ಆಯ ತಪ್ಪಿದ ಉದ್ದಿನ ಮೂಟೆಯಂತೆ ದಾಳಿಕಾರನ ದೇಹ ಸೇತುವೆಯ ಗೋಡೆಗೆ ಒರಗಿತು. ಕೂಡಲೆ ಕಾಮೇಶ್ ಅವನ ಕಾಲುಗಳನ್ನು ಹಿಡಿದೆತ್ತಿ ಹಳ್ಳಕ್ಕೆ ತಳ್ಳಿದ. ಭಾರವಾದ ವಸ್ತುವೊಂದು ನೀರಿಗೆ ಬಿದ್ದ ಸದ್ದು ಕೇಳಿಸಿತು.

ಸ್ತಂಭಿತನಾದ ರಮಾನಂದ್ ಎಚ್ಚರಗೊಳ್ಳುವಷ್ಟರಲ್ಲಿ ಇಷ್ಟೆಲ್ಲ ನಡೆದು ಹೋಯಿತು. ಆಗ ಕೆಳಗುರುಳಿದ್ದ ದಾಳಿಕಾರನ ಮೇಲೆ ಅವನ ದೃಷ್ಟಿಬಿದ್ದಿತು. ಮೂರ್ಛಿತನಾಗಿದ್ದ ಆ ಕಳ್ಳ ಎಚ್ಚೆತ್ತು ಜೇಬಿಂದ ಹರಿತವಾದ ಚೂರಿಯೊಂದನ್ನು ಹೊರಗೆ ತೆಗೆದು ಕಾಮೇಶನ ಮೇಲೆ ಬೀಳಲು ಹೊಂಚು ಹಾಕುತ್ತಿದ್ದ. ಕಾಮೇಶ್ ಮುಂದೆ ಹೋಗುವಷ್ಟರಲ್ಲಿ ಪ್ರಮೀಳಾ ಓಡಿ ಬಂದು ದಾಳಿಕಾರನ ಕೈಹಿಡಿದಳು. ಕಾಮೇಶ್ ಕೆಳಗೆ ನೋಡಿ ಬೂಡ್ಸಿನ ಕಾಲಿಂದ ಚೂರಿ ಹಿಡಿದಿದ್ದ ಕೈಯನ್ನು ಬಲವಾಗಿ ತುಳಿದ. ದಾಳಿಕಾರನಿಗೆ ಪುನಃ ಪ್ರಜ್ಞೆ ತಪ್ಪಿತು.

" ಇವನ ಸ್ನೇಹಿತರು ಹಳ್ಳದಲ್ಲಿ ಮೀನು ಹಿಡಿಯುತ್ತಿದ್ದಾರೆ. ಇವನನ್ನೂ ಅವರ ಹತ್ತಿರ ಕಳುಹಿಸೋಣ. ನೀನು ಕಾಲು ಹಿಡಿ, ರಮಾನಂದ್ "

ಎಂದು ಹೇಳಿ ಕಾಮೇಶ್ ಮೂರ್ಛಿತನ ಭುಜಗಳನ್ನು ಹಿಡಿದು ಎತ್ತಿದ. ರಮಾನಂದ್ ಕಾಲು ಹಿಡಿದು ಎತ್ತಿದ. ಇಬ್ಬರೂ ದೇಹವನ್ನು ಎರಡುಸಾರಿ ಆಡಿಸಿ ಹಳ್ಳಕ್ಕೆಸೆದರು.

ಈ ರೀತಿ ದಾಳಿಕಾರರ ಜಲಕ್ರಿಯೆ ಮುಗಿಸಿದ ಮೇಲೆ ಕಾಮೇಶನ ದೃಷ್ಟಿ ನಾಗರಿಕನ್ನ ಕಡೆ ತಿರುಗಿತು. ಹೊಡೆತದಿಂದ ನಿಶ್ಚೇಷ್ಟಿತನಂತೆ ಬಿದ್ದಿದ್ದ ಅವನನ್ನು ಕಾಮೇಶ್ ಭುಜ ಹಿಡಿದು ಎತ್ತಿ ನಿಲ್ಲಿಸಿ " ಯಾವ ಊರಪ್ಪ ನಿನ್ನದು ? ಎಲ್ಲಿಗೆ ಹೋಗಬೇಕು ?" ಎಂದು ಕೇಳಿದನು.

ಹಳ್ಳದ ಮೇಲಿಂದ ಬೀಸುತ್ತಿದ್ದ ತಂಗಾಳಿಯಿಂದ ನಾಗರಿಕನಿಗೆ ಪ್ರಜ್ಞೆ ಬಂತು. ಎಡಗೈಯಿಂದ ಸೂಟ್‌ಕೇಸನ್ನು ಭದ್ರವಾಗಿ ಹಿಡಿದುಕೊಂಡು ಬಲಗೈಯಿಂದ ಕಾಮೇಶನ ಮುಖ ಪರಚಿ ಬಿಡಿಸಿಕೊಳ್ಳಲು ಪ್ರಯತ್ನಿಸಿದನು. " ನನ್ನ ಮೇಲೇಕಪ್ಪ ಬೀಳುತ್ತಿ ? ನಾನು ಕಳ್ಳನಲ್ಲ. ಕಳ್ಳರು ಓಡಿಹೋದರು." ಎಂದು ಕಾಮೇಶ್ ಹೇಳಿದನು.

ಆಗಲೂ ನಾಗರಿಕನಿಗೆ ಭರವಸೆ ಹುಟ್ಟಿದಂತೆ ಕಾಣಲಿಲ್ಲ. ಸಿಂಧಿಯಲ್ಲಿ ಏನೋ ಹೇಳುತ್ತಾ ಮೊದಲಿಗಿಂತ ಎರಡರಷ್ಟು ವೇಗದಿಂದ ಕಾಮೇಶನನ್ನು ಹೊಡೆಯ ತೊಡಗಿದನು. ಆಗ ಕಾಮೇಶನಿಗೆ ನಿಜವಾಗಿ ಆಶ್ಚರ್ಯವಾಯಿತು. ಯಾರ ಸಹಾಯಕ್ಕೆ ಬಂದು ಮೂರು ಮಂದಿ ದಾಳಿಕಾರರೊಡನೆ ಹೋರಾಡಿ ಅವರೆಲ್ಲರನ್ನೂ ಹಳ್ಳಕ್ಕೆ ತಳ್ಳಿದನೋ ಆ ಮನುಷ್ಯ ತನ್ನ ರಕ್ಷಕನ ಮೇಲೆ ಕೈಮಾಡುವುದೆಂದರೆ ಯಾರಿಗೆ ತಾನೆ ಆಶ್ಚರ್ಯವಾಗುವುದಿಲ್ಲ. ಕ್ರಮ ಕ್ರಮವಾಗಿ ಏಟುಗಳು ಬಲವಾಗುತ್ತ ಬಂತು. ಕಾಮೇಶನಿಗೆ ತಡೆಯುವುದು ಅಸಾಧ್ಯ ವಾಯಿತು. ಆಗ ಅವನು ಬಲಗೈಯ ಮುಷ್ಟಿಯಿಂದ ನಾಗರಿಕನ ಗಡ್ಡಕ್ಕೆ ಬಲವಾಗಿ ಗುದ್ದಿದನು. ಹರಿದ ಬೈಸಿಕಲ್ ಟ್ಯೂಬಿನಂತೆ ಒಂದು ಸಾರಿ ಶಣ್ಣಗೆ ಕಿರಚಿ ನಾಗರಿಕನು ನೆಲಕ್ಕುರುಳಿದನು.

" ನಿನ್ನ ಸಾಹಸಕ್ಕೆ ಇದು ನಾಲ್ಕನೆಯ ಬಲಿ. ಈಗೇನು ಮಾಡುವುದು ?"

ರಮಾನಂದನ ಪ್ರಶ್ನೆ ಕಾಮೇಶನ ಕಿವಿಗಳನ್ನು ಪ್ರವೇಶಿಸಿ ಹೋರಾಟದಿಂದ ಸ್ತಂಭಿತವಾಗಿದ್ದ ಮೆದುಳಿಗೆ ಅದರ ಅರ್ಥ ವ್ಯಕ್ತವಾಗಲು ಒಂದೆರಡು ಕ್ಷಣ ಗಳಾದವು. ಕೈವಸ್ತ್ರದಿಂದ ಮುಖವನ್ನೊರೆಸಿಕೊಳ್ಳುತ್ತಾ ಕಾಮೇಶ್ ನಿಧಾನ ವಾಗಿ ಉತ್ತರ ಕೊಟ್ಟನು. " ನನಗೂ ಅದೇ ಯೋಚನೆ. ಏನು ಮಾಡುವುದು ಈಗ ?"

" ಮೂವರಿಗೆ ಜಲ ಸಮಾಧಿ. ಇನ್ನು ಇವನ ಗತಿಯೇನೋ ?" ಎಂದು ರಮಾನಂದ್ ನಾಗರಿಕನ ಸ್ಥಿತಿಯನ್ನು ಪರೀಕ್ಷಿಸ ತೊಡಗಿದನು.

" ಹಳ್ಳದಲ್ಲಿ ಜಲಸಮಾಧಿಗಾಗುವಷ್ಟು ನೀರಿಲ್ಲ. ಸ್ಟೇಷನ್ನಿನಿಂದ ಬರು ವಾಗ ನಾನದನ್ನು ಗಮನಿಸಿದ್ದೇನೆ. ನೀರಲ್ಲಿ ಬಿದ್ದು ನೋವು ಮಾಯವಾಗಿ ಅವರು ಪುನಃ ಏಳುವರು."

ಕಾಮೇಶ್ ಉತ್ತರ ಕೊಟ್ಟ.

" ಇವನು ಮೂರ್ಛಿತನಾದಂತಿದೆ. ಪ್ರಾಣ ಹೋಗಿಲ್ಲ. ಇಲ್ಲಿಯೇ ಬಿಟ್ಟು ಹೋದರೆ ಸುಧಾರಿಸಿಕೊಂಡು ಎದ್ದು ಹೋಗುತ್ತಾನೆ."

"ಇವನೂ ಆ ಕಳ್ಳರಂತೆ ಬದಮಾಷ್. ಆದರೂ ಬಿಟ್ಟು ಹೋಗಲು ನನಗೆ ಮನಸ್ಸು ಬರುವುದಿಲ್ಲ. ನಾವು ಕಣ್ಮರೆಯಾದರೆ ಆ ಕಳ್ಳರೋ ಅಥವಾ ಆ ಗುಂಪಿನ ಇತರರೋ ಪುನಃ ಇವನ ಮೇಲೆ ಬೀಳುವರು. ಇವನ ಕೈಯಲ್ಲಿನ ಸೂಟ್ ಕೇಸ್ ಗಮನಿಸಿದೆಯಾ?"

ಆಗ ರಮೇಶನ ದೃಷ್ಟಿ ಸೂಟ್ ಕೇಸಿನ ಕಡೆ ಉರುಳಿತು. ಉಕ್ಕಿನ ಸರಪಳಿಯಿಂದ ಸೂಟ್‌ಕೇಸ್ ನಾಗರಿಕನ ಕೈಗೆ ಭದ್ರವಾಗಿ ಕಟ್ಟಲ್ಪಟ್ಟಿತ್ತು. ಕೇಸನ್ನು ಕೈಯಿಂದೆತ್ತಿದನು. ಆಕಾರದಲ್ಲಿ ಚಿಕ್ಕದಾದರೂ ಸೀಸದ ಗುಂಡಿನಂತೆ ಭಾರವಾಗಿತ್ತು.

"ನಿಜ. ಈ ಸೂಟ್ ಕೇಸನ್ನು ಅಪಹರಿಸಲು ಕಳ್ಳರು ಇವನ ಮೇಲೆ ಬಿದ್ದಂತಿದೆ. ಕಾಮೇಶ್, ನೀನು ಇವನ ಹತ್ತಿರವಿದ್ದರೆ ನಾನು ಹೋಟಲಿಗೆ ಹೋಗಿ ಜನರನ್ನು ಸಹಾಯಕ್ಕೆ ಕರತರುತ್ತೇನೆ."

"ಇದೇನು ಬೊಂಬಾಯೆಂದು ತಿಳಿದೆಯಾ. ರಾತ್ರಿಯೆಲ್ಲಾ ಹೋಟಲ್ ತೆರೆದಿರುವುದಕ್ಕೆ? ನಾವು ಅಲ್ಲಿಂದ ಹೊರಟಾಗಲೇ ಕೆಲಸಗಾರರು ದೀಪ ಆರಿಸಿ ಮಲಗಿದ್ದನ್ನು ನೋಡಲಿಲ್ಲವೆ. ಈಗಿರುವುದು ಒಂದೇ ದಾರಿ"

ಎಂದು ಹೇಳಿ ಕಾಮೇಶ್ ನಾಗರಿಕನನ್ನು ಎತ್ತಿ ಭುಜದ ಮೇಲೆ ಹಾಕಿಕೊಂಡು ಹೋಟಲಿನ ಕಡೆ ಹೊರಟ. ಕೈಗೆ ಕಟ್ಟಿದ್ದ ಸೂಟ್‌ಕೇಸ್ ತುಂಟ ಹುಡುಗನ ಕಾಲಿಗೆ ಕಟ್ಟಿದ ತುಂಡಿನಂತೆ ನೇತಾಡುತ್ತಾ ಕಾಲಿಗೆ ತೊಡರುತ್ತಿತ್ತು. ಸರಪಳಿ ಎಳೆದು ಕಾಮೇಶ್ ಸೂಟ್ ಕೇಸನ್ನ ಕಂಕುಳಿಗೆ ಇರುಕಿಸಿದ.

"ಇದೇನು ನೀನು ಮಾಡುತ್ತಿರುವ ಕೆಲಸ! ದಾರಿಯಲ್ಲಿ ಜನ ನೋಡಿದರೆ ಏನೆಂದಾರು?" ರಮಾನಂದ್ ಆಕ್ಷೇಪಿಸಿದ.

"ಅನ್ನುವುದೇನು? ಕುಡಿದು ಪ್ರಜ್ಞೆ ತಪ್ಪಿ ಬೀದಿಯಲ್ಲಿ ಬಿದ್ದಿದ್ದ ನೆಂಟನೊಬ್ಬನನ್ನು ಮನೆಗೆ ಸಾಗಿಸುತ್ತಿದ್ದೇನೆ. ನನ್ನಿಂದ ಕಲಿಯಬೇಕು, ಪರೋಪಕಾರದ ವಿಧಾನವನ್ನು. ನಿನಗೆ ಇಷ್ಟವಿಲ್ಲದಿದ್ದರೆ ಹೋಟಲಿಗೆ ಹೋಗು, ನಾನು ಹಿಂದಿನಿಂದ ಬರುತ್ತೇನೆ." ಎಂದನು ಕಾಮೇಶ್.

ಈ ಮೆರವಣಿಗೆಯಲ್ಲಿ ಭಾಗವಹಿಸುವುದು ರಮಾನಂದನಿಗೆ ಇಷ್ಟವಿರಲಿಲ್ಲ. ಬೊಂಬಾಯಿನ ವಿಖ್ಯಾತ ಬ್ಯಾರಿಸ್ಟರೊಬ್ಬನಿಗೆ ಅದು ವಿಹಿತವಾದ ಕಾರ್ಯವೇ ? ಬೇಗ ಬೇಗ ಹೆಜ್ಜೆ ಹಾಕುತ್ತ ಮುಂದೆ ಹೊರಟ. ಪ್ರಮೀಳೆಯನ್ನೂ ಸಂಗಡ ಕರೆದುಕೊಂಡು ಹೋಗುವುದು ಅವನಿಗೆ ಉಚಿತವಾಗಿತ್ತು. ಆ ಯೋಚನೆ ಹೊಳೆಯುವುದರೊಳಗಾಗಿ ಅರ್ಧ ಫರ್ಲಾಂಗ್ ಮುಂದೆ ಹೋಗಿದ್ದ. ಪ್ರಮೀಳೆಗಾಗಿ ಪುನಃ ಹಿಂದಿರುಗುವುದು ನಿರುಪಯುಕ್ತವೆಂದೂ, ಕಾಮೇಶನಂತಹ ಚತುರನಾದ ಸಾಹಸಿ ಪತ್ತೇದಾರನು ತನ್ನ ಪ್ರೇಯಸಿಯನ್ನು ಮರೆತು ದಾರಿಯಲ್ಲಿ ಬಿಟ್ಟು ಬರುವ ಸಂಭವವಿಲ್ಲವೆಂದೂ ಭಾವಿಸಿ ಮುಂದೆ ಹೊರಟ.

ರಾಜಕೋಟೆ ಸೌರಾಷ್ಟ್ರಕ್ಕೆ ದೊಡ್ಡ ನಗರವಾದರೂ ಬೊಂಬಾಯ್ ಕಲ್ಕತ್ತಾ ನಗರಗಳಂತೆ ರಾತ್ರಿಯೆಲ್ಲ ದೀಪೋತ್ಸವ ಜನಸಂದಣಿ ಇರಲಿಲ್ಲ. ಎಲ್ಲ ಪ್ರಾಂತೀಯ ನಗರಗಳಂತೆ ರಾತ್ರಿ ೧೦ ಗಂಟೆ ಸುಮಾರಿಗೆ ಬೀದಿಗಳೆಲ್ಲ ನಿರ್ಜನವಾಗುವವು. ರಮಾನಂದ್ ಹೋದ ಮೇಲೆ ಕಾಮೇಶ್ ಪ್ರಮೀಳೆಯ ಕಡೆ ತಿರುಗಿ "ಯಾರಾದರೂ ಎದುರಿಗೆ ಸಿಕ್ಕರೆ ನೀನು ಈ ನನ್ನ ಕುಡುಕ ನೆಂಟನ ಹೆಂಡತಿಯಂತೆ ನಟಿಸಬೇಕು. ಈಗಲಿಂದ ಮಾತುಗಳನ್ನು ಗಟ್ಟಿ ಮಾಡಿಕೊ" ಎಂದು ಎಚ್ಚರಿಸಿದ.

"ಈ ಸಾರಿ ಬೊಂಬಾಯಿಗೆ ಹಿಂದಿರುಗಿದ ಮೇಲೆ ಯಾವುದಾದರೂ ನಾಟಕ ಕಂಪನಿಗೆ ಸೇರಿ ಅಭಿನಯ ಕಲಿಯುತ್ತೇನೆ" ಎಂದಳು ಪ್ರಮೀಳಾ.

ಅದೃಷ್ಟಕ್ಕೆ ಬೀದಿಯಲ್ಲಿ ಯಾರೂ ಎದುರು ಬೀಳಲಿಲ್ಲ. ಅಡಚಣೆಯಿಲ್ಲದೆ ಹೋಟಲಿನ ಕಾಂಪೌಂಡ್ ಗೋಡೆಯ ಹತ್ತಿರ ಬಂದರು. "ಈ ಮನುಷ್ಯ ಹೊರೆ ಹೊತ್ತು ನಾವು ಹೆಬ್ಬಾಗಿಲ ಹತ್ತಿರ ಹೋದರೆ ದ್ವಾರಪಾಲಕ ನಿದ್ದೆಗಣ್ಣಲ್ಲೂ ತಡೆಯುವುದು ಖಂಡಿತ. ನಿನಗೆ ಗೋಡೆ ಹಾರಿ ಅಭ್ಯಾಸವಿದೆಯೇ ?" ಎನ್ನುತ್ತಾ ಕಾಮೇಶ್ ನಾಗರಿಕನನ್ನು ಗೋಡೆ ಎಟಕಿಸಿ ಮೇಲೆ ಮಲಗಿಸಿದ. ದೇಹದ ಅರ್ಧ ಈ ಕಡೆ, ಅರ್ಧ ಆ ಕಡೆ ಜೋತಾಡುತ್ತಿತ್ತು. ಪ್ರಮೀಳಾ ಮಾರುತ್ತರ ಕೊಡುವುದರಲ್ಲಿ ಕಾಮೇಶ್ ಅವಳ ನಡು ಹಿಡಿದೆತ್ತಿ ಗೋಡೆಯ ಮೇಲೆ ಕುಳ್ಳಿರಿಸಿದ. ತಾನೂ ಹಾರಿ ಪಾರ್ಶ್ವದಲ್ಲಿ ಕುಳಿತ.

ಕಾಂಪೌಂಡ್ ಗೋಡೆ ಅಷ್ಟೇನೂ ಎತ್ತರವಿರಲಿಲ್ಲ. ರಸ್ತೆಗಿಂತ ಹೋಟಲ್ ಕಡೆ ಎತ್ತರ ಕಡಿಮೆಯಾಗಿತ್ತು. ಕ್ಷಣಾರ್ಧದಲ್ಲಿ ಕಾಮೇಶ್ ಕೆಳಗೆ ದುಮುಕಿ, ಪ್ರಮೀಳೆಯನ್ನು ಇಳಿಸಿಕೊಂಡು, ಹಿಂದಿನಂತೆ ನಾಗರಿಕನನ್ನು ಹೆಗಲೇರಿಸಿ ಕತ್ತಲೆಯಲ್ಲಿ ದಾರಿ ಅರಸುತ್ತಾ ಹೋಟಲಿನಲ್ಲಿ ತನ್ನ ಬಿಡಾರದ ಕಡೆ ಹೊರಟ. ತೋಟದ ಕಡೆಗಿದ್ದ ಕೆಳಗಡೆಯ ಬಿಡಾರವನ್ನೇ ಆರಿಸಿಕೊಂಡಿದ್ದುದರಿಂದ ಅನುಕೂಲವೇ ಆಯಿತು. ಪ್ರಮೀಳಾ ಮುಂದೆ ಹೋಗಿ ಬಾಗಿಲು ತೆರೆದಳು. ಕಾಮೇಶ್ ಒಳಗೆ ಬಂದ ಮೇಲೆ ಬಾಗಿಲು ಮುಚ್ಚಿ ಮೇಜಿನ ಮೇಲಿದ್ದ ಟಾರ್ಚ ಲೈಟ್ ಹತ್ತಿಸಿದಳು.

"ನೀನು ಬಿಡಾರಕ್ಕೆ ಬಂದ ಕೂಡಲೆ ಎಲೆಕ್ಟ್ರಿಕ್ ಸ್ವಿಚ್ ಹಾಕ ಬಹುದೆಂದು ಭಯವಾಯಿತು. ಬ್ಯಾರಿಸ್ಟರ್‌ನ ಸೆಕ್ರಿಟರಿಯಾದರೂ ನನ್ನಿಂದ ಕಲಿತ ಪಾಠ ಮರೆತಿಲ್ಲ ನೀನು ಎಂಬುದನ್ನು ಕಂಡು ಸಂತೋಷವಾಯಿತು"—ಎಂದು ಕಾಮೇಶ್ ಪ್ರಮೀಳೆಯನ್ನು ಶ್ಲಾಘಿಸಿ ಮಲಗುವ ಕೋಣೆಯೊಂದರ ಬಾಗಿಲನ್ನು ತೆರೆದು ನಾಗರಿಕನ ದೇಹವನ್ನು ಅಲ್ಲಿಯ ಹಾಸಿಗೆಯ ಮೇಲೆ ಮಲಗಿಸಿಟ್ಟು ಹಿಂದಿರುಗಿದ. ಅಷ್ಟರಲ್ಲಿ ಪ್ರಮೀಳಾ ಹಾಲಿನ ಕಿಟಕಿ ಬಾಗಿಲುಗಳನ್ನು ಭದ್ರವಾಗಿ ಮುಚ್ಚಿ ತೆರೆಯೆಳೆದು ಮೇಜಿನ ಮೇಲಿನ ಸಣ್ಣ ದೀಪ ಹತ್ತಿಸಿ ಪಾನೀಯ ಸಿದ್ಧಪಡಿಸುತ್ತಿದ್ದಳು. ಕೈಯಿಂದ ಗ್ಲಾಸ್ ತೆಗೆದುಕೊಂಡು ಒಂದೇ ಗುಟುಕಿಗೆ ಖಾಲಿ ಮಾಡಿ ಕಾಮೇಶ್ ಕುರ್ಜಿಯ ಮೇಲೆ ಕುಳಿತುಕೊಂಡ.

---

## ಏಳನೆಯ ಪರಿಚ್ಛೇದ

"ನಾಗರಿಕನನ್ನೇನು ಮಾಡುವಿರಿ? ಹಾಸಿಗೆಯ ಮೇಲೆ ಅವನು ವಿಶ್ರಾಂತಿ ಪಡೆಯುತ್ತಿರಬೇಕೇ?"

ಇನ್ನೊಂದು ಗ್ಲಾಸಿನಲ್ಲಿದ್ದ ಪಾನೀಯ ತಾನು ಕುಡಿಯುತ್ತಾ ಪ್ರಮೀಳಾ ಕೇಳಿದಳು.

"ಅವನ ಕೈಗಳನ್ನು ಮಂಚಕ್ಕೆ ಕಟ್ಟಿ ಬಂದಿದ್ದೇನೆ. ಈಗೇನೋ ನಿದ್ದೆ ಮಾಡುತ್ತಿದ್ದಾನೆ. ಎಚ್ಚರವಾಗುವಷ್ಟರಲ್ಲಿ ಅವನ ವಿಚಾರ ನಿರ್ಧರಿಸಿ ಕೊಳ್ಳಬೇಕು."

"ಎಚ್ಚರವಾಗಿ ಅರಚಿಕೊಳ್ಳಲು ಪ್ರಾರಂಭಿಸಿದರೆ ತಾನೇ ನಿರ್ಧಾರ ವಾಗುವುದು."

ಕಾಮೇಶ್ ಸಿಗರೆಟ್ ಹತ್ತಿಸಿ ಧೂಮಪಾನದ ಆನಂದವನ್ನು ಕ್ಷಣಕಾಲ ಅನುಭವಿಸಿ ಆ ಮೇಲೆ ಉತ್ತರ ಕೊಟ್ಟ—"ನಾಗರಿಕ ಅರಚಿಕೊಳ್ಳುವ ಸ್ವಭಾವದವನಲ್ಲ. ಅವನನ್ನು ಹೆಗಲ ಮೇಲೆ ಹೊತ್ತು ತಂದ ನನಗೆ ಆ ವಿಚಾರ ಚೆನ್ನಾಗಿ ತಿಳಿದಿದೆ. ಅವನು ಇಲ್ಲಿರುವುದನ್ನು ರಹಸ್ಯವಾಗಿಡಲು ನಮಗೆಷ್ಟು ಆಸಕ್ತಿಯಿದೆಯೋ ಅವನಿಗೂ ಅಷ್ಟೇ ಆಸಕ್ತಿಯಿದೆ. ಎಚ್ಚರವಾದಾಗ ನೋವಿಂದ ಮುಲುಗಬಹುದು. ಖಂಡಿತ ಅರಚುವುದಿಲ್ಲ."

ಕಾಮೇಶ್ ಮಾತು ಮುಗಿಸುತ್ತಿದ್ದಂತೆ ಬಿಡಾರದ ಹೊರಗೆ ಬಾಗಿಲು ಸದ್ದಾಯಿತು. ಗಡಿಯಾರದಲ್ಲಿ ಗಂಟೆ ನೋಡಿದ. ಹನ್ನೆರಡು ಗಂಟೆ ಹತ್ತು ನಿಮಿಷ. ರಮಾನಂದ್ ಹಿಂದಿರುಗಿರಬೇಕು. ತನಗಿಂತ ಮೊದಲೆ ಹೊರಟವನು ತಡವಾಗಿ ಬರಲು ಕಾರಣ? ವಕೀಲನಿಗೂ ಪತ್ತೆದಾರನಿಗೂ ಕಾಲ ಪರಿಗಣನೆ ಯಲ್ಲಿ ಇರಬಹುದಾದ ಅಂತರವೇ?

ಕಾಮೇಶ್ ಎದ್ದು ಹೋಗಿ "ಯಾರು? ರಮಾನಂದ್, ಮೆಲ್ಲಗೆ ಒಳಗೆ ಬಾ ಶಬ್ದಮಾಡಬೇಡ" ಎಂದ.

ರಮಾನಂದ್ ಒಳಗೆ ಬಂದು ಕಾಮೇಶನನ್ನು ದುರುಗುಟ್ಟಿ ನೋಡುತ್ತಾ "ನಿನ್ನ ಸಹವಾಸ ನನಗೆ ಒಂದು ದಿನಕ್ಕೆ ಸಾಕಾಯಿತಪ್ಪ, ಮಹಾರಾಯ. ಊಟ ಮುಗಿಸಿಕೊಂಡು ತಿರುಗಾಡಲು ಹೋದ್ದಕ್ಕೆ ಎಷ್ಟೊಂದು ರಂಪ ಮಾಡಿ ಬಿಟ್ಟೆ! ನಾಗರಿಕನ ಗತಿಯೇನಾಯಿತು?" ಎಂದ.

" ಅವನನ್ನು ಆ ಕೊಟಡಿಯಲ್ಲಿ ಮುಚ್ಚಿಟ್ಟಿದ್ದೇನೆ. ಅವನು ಎಚ್ಚೆತ್ತ ಮೇಲೆ ಕೆಲವು ರಹಸ್ಯ ವಿಚಾರಗಳು ಹೊರಬೀಳುವ ಸಂಭವವಿದೆ. ರತ್ನಹಾರದ ವಿಷಯವೂ ಬರಬಹುದೋ ಏನೊ ? ಈಗನಿಂದ ನೀನು ಸಿದ್ಧವಾಗಿರಬೇಕು."

" ನೀನು ನನ್ನನ್ನು ಕುಚೋದ್ಯ ಮಾಡುತ್ತಿರುವೆ, ಕಾಮೇಶ್. ರತ್ನ ಹಾರಕ್ಕೂ ಇವನಿಗೂ ಯಾವ ಸಂಬಂಧ? ಅಲ್ಲದೆ ಅದು ಬೊಂಬಾಯಿನ ಬ್ಯಾಂಕೊಂದರ ಸೇಪ್ ಡಿಪಾಜಟ್ಟಿನಲ್ಲಿ ಸುರಕ್ಷಿತವಾಗಿದೆ. ನಾವು ಇಲ್ಲಿಗೆ ಬಂದಿರುವುದು ಕಿಷನ್‌ಚಂದನನ್ನು ಹುಡುಕುವುದಕ್ಕಾಗಿ ಎಂಬುದನ್ನೇ ನೀನು ಮರೆತಂತಿದೆ."

" ನಾವು ಕಿಷನ್‌ಚಂದನನ್ನು ಪತ್ತೆ ಹಚ್ಚ ಬೇಕಾದರೆ ರತ್ನಹಾರದ ಮುಖಾಂತರವೇ ? ನನ್ನ ಅನುಭವದಿಂದ ಹೇಳುತ್ತೇನೆ, ರಮಾನಂದ್. ಅಡುಗೂಲಜ್ಜಿ ಕತೆಯಲ್ಲಿ ಮಂತ್ರವಾದಿಯ ಪ್ರಾಣ ದ್ವೀಪಾಂತರದಲ್ಲಿ ಗಿಣಿ ಯೊಂದರ ಕೊರಳಲ್ಲಿದ್ದಂತೆ ಕಿಷನ್‌ಚಂದನ ಪ್ರಾಣ ರತ್ನಹಾರದಲ್ಲಿದೆ. ಆ ಸೂತ್ರದಿಂದಲೇ ನಾವು ಅವನಿರುವ ಸ್ಥಳವನ್ನು ಪತ್ತೆಮಾಡಬೇಕು."

" ಆ ಸೂತ್ರ ನಾಗರಿಕನ ಕೈಯಲ್ಲಿದೆಯೆಂದು ನೀನು ಕನಸು ಕಾಣುತ್ತಿರು ವಂತಿದೆ."

" ಕನಸೋ ಕಳವಳವೋ ನೋಡೋಣ ಬಾ."

ಎಂದು ಕಾಮೇಶ್ ಮಲಗುವ ಕೋಣೆಯ ಬಾಗಿಲು ತೆರೆದು ವಿದ್ಯುದ್ದೀಪದ ಗುಂಡಿಯನ್ನೊತ್ತಿದ. ಕೋಣೆ ನೀಲಿ ಬಣ್ಣದ ಬೆಳಕಿಂದ ತುಂಬಿತು. ಹಾಸಿ ಗೆಯ ಮೇಲೆ ನಾಗರಿಕನ ದೇಹ ಮೃತ್ಯುವಿನ ಕೊನೆಯ ಚೇಷ್ಟೆಯಿಂದ ಅಲುಗಾಡಿದಂತೆ ಮುದುಡಿ ನಿಶ್ಚೇಷ್ಟಿತವಾಗಿ ಬಿದ್ದಿತ್ತು. ಕಾಮೇಶ್ ಮತ್ತು ರಮಾನಂದ್ ಮಂಚದ ಬಳಿ ಹೋಗಿ ನೋಡಿದರು. ಹಿತ್ತಾಳೆ ಹಿಡಿಯ ಚಾಕೊಂದು ಆಮೂಲಾಗ್ರವಾಗಿ ನಾಗರಿಕನ ಎದೆಗೆ ಇರಿಯಲ್ಪಟ್ಟಿತ್ತು. ಬಿರಿ ಗಣ್ಣುಗಳು ತೆರೆದಿದ್ದವು. ನೋಡುತ್ತಿದ್ದಂತೆ ಕೈಗೆ ಕಟ್ಟಲ್ಪಟ್ಟಿದ್ದ ಸೂಟ್‌ಕೇಸ್ ಜಾರಿ ದಡಾರನೆ ಕೆಳಗುರುಳಿತು.

ಮೃತನ ಕೈಗೂ ಮಂಚಕ್ಕೂ ಹಾಕಿದ್ದ ಉಕ್ಕಿನ ಕೋಳವನ್ನು ಬಿಚ್ಚಿ ಕಾಮೇಶ್ ಜೇಬಲ್ಲಿಟ್ಟುಕೊಂಡನು. ಮೃತ್ಯುವಿನ ಎದುರಿನಲ್ಲಿ ಹೆದರುವ ಸ್ವಭಾವ ಅವನಲ್ಲಿ ಎಂದೋ ಮಾಯವಾಗಿತ್ತು. ಆದರೂ ಹೆಪ್ಪುಗಟ್ಟಿದ ಮಂಜಿನ ತುಂಡನ್ನು ಬೆನ್ನಿನ ಮೇಲಿಟ್ಟಂತೆ ಅವನ ದೇಹ ಕಂಪಿತವಾಯಿತು. ನಾಗರಿಕ ನನ್ನು ಮಂಚದ ಮೇಲೆ ಮಲಗಿಸಿ ಹೋಗಿ ಐದಾರು ನಿಮಿಷ ಕೂಡಾ ಕಳೆದಿರಲಿಲ್ಲ. ಆ ಅಲ್ಪಾವಧಿಯಲ್ಲಿ ಪಾರ್ಶ್ವದ ಕೊಟಡಿಯಲ್ಲಿ ತಾನು ಮಾತಾ ಡುತ್ತಿದ್ದಂತೆ ಇಲ್ಲಿ ಈ ಕೃತ್ಯ ನಡೆದಿದೆ. ತನ್ನಂತಹ ನುರಿತ ಪತ್ತೇದಾರನಿಗೂ ಭೀತಿ ಮತ್ತು ಚಿಂತಾ ಸೂಚಕವಾದ ಘಟನೆಯಿದೆಂದು ಕಾಮೇಶ್ ತಿಳಿದನು.

ನಾಲ್ಕಾರು ಕ್ಷಣಗಳು ಯಾರೂ ಮಾತಾಡಲಿಲ್ಲ. ಕೊನೆಗೆ ನೀರವತೆ ಯನ್ನು ಭೇದಿಸಿ ಪ್ರಮೀಳಾ " ಇದು ಹೇಗೆ ನಡೆಯಿತು ?" ಎಂದು ಪ್ರಶ್ನಿಸಿದಳು.

" ನಿನ್ನ ಪ್ರಶ್ನೆಯಷ್ಟೇ ಸರಳ ರೀತಿಯಲ್ಲಿ ಕೃತ್ಯ ನಡೆದಿದೆ, ಪ್ರಮೀಳಾ " —ಕಾಮೇಶ್ ಉತ್ತರ ಕೊಟ್ಟನು. " ಸೇತುವೆಯ ಮೇಲೆ ನಾವು ನೋಡಿದ ಗ್ಯಾಂಗಿನವನೊಬ್ಬನು ಹಿಂಬಾಲಿಸಿ ಬಂದು ನಾವು ಹಾಲಲ್ಲಿ ದಾಹ ಪರಿಹರಿಸಿ ಕೊಳ್ಳುತ್ತಿದ್ದಾಗ ಕಿಟಕಿಯ ಮುಖಾಂತರ ಇಲ್ಲಿಗೆ ಬಂದು ಕೃತ್ಯ ನಡೆಸಿದ್ದಾನೆ. ಬೆಕ್ಕಿನ ಕಾಲುಗಳಿರಬೇಕು ಅವನಿಗೆ. ನಾನು ಕಿವಿಯರಳಿಸಿ ಕೇಳುತ್ತಿದ್ದರೂ ಸ್ವಲ್ಪವೂ ಸದ್ದಾಗಲಿಲ್ಲ. ಅವರು ನಾಗರಿಕನನ್ನು ಕೊಂದದ್ದೇಕೆ ಎಂಬುದು ನಿನ್ನ ಪ್ರಶ್ನೆಯ ಉದ್ದೇಶವಾದರೆ ಉತ್ತರ ಯೋಚಿಸಿ ಹೇಳಬೇಕು."

ಪ್ರಮೀಳಾ ರಮಾನಂದ್ ಮಾತಾಡಲಿಲ್ಲ. ರತ್ನಹಾರದ ಸಂಬಂಧದಲ್ಲಿ ಇದು ಎರಡನೆಯ ಕೊಲೆ. ಕೊಲೆಯ ಕಾರಣವೇನೆಂಬುದೂ ಈಗ ಪರಿಷ್ಕಾರ ವಾಗಿಲ್ಲ. ಹಳೆಯ ಕಕ್ಷಿಗಾರನೊಬ್ಬನನ್ನು ರಕ್ಷಿಸುವ ಪ್ರಯತ್ನದಲ್ಲಿ ಹೆಜ್ಜೇನಿನ ಗೂಡನ್ನು ಕೆಣಕಿದಂತಾಯಿತು ಎಂದು ಮನಸ್ಸಿನಲ್ಲೇ ಮರುಗಿದನು.

" ನಾನು ನಾಗರಿಕನನ್ನು ಅಪಹರಿಸಿದಾಗ ಇದೇನು ಹುಚ್ಚಾಟ ಎಂದು ನಕ್ಕೆಯಲ್ಲವೇ, ರಮಾನಂದ್ ? ಆಗ ನಾನು ಹೇಳಿದ್ದು ನಿಜವಾಯಿತು. ಸೇತು ವೆಯ ಮೇಲೆ ಬಿಟ್ಟಿದ್ದರೆ ನಾವು ಕಣ್ಮರೆಯಾದ ತಕ್ಷಣ ಮುಗಿಸಿ ಬಿಡುತ್ತಿದ್ದರು" ಎಂದ ಕಾಮೇಶ್.

"ಈ ಬಡ ಪ್ರಾಣಿಯನ್ನು ಇಲ್ಲಿಗೆ ಹೊತ್ತು ತಂದದ್ದರಿಂದ ಆದ ಫಲ ವಾದರೂ ಏನು? ಬೀದಿಯಲ್ಲಿ ಹೋಗುವ ಮಾರಿ ಮನೆಗೆ ಬಂದು ಹೋಗು ಎಂದ ಹಾಗೆ" ಎಂದು ರಮಾನಂದ್ ಬೇಸರದಿಂದ ನುಡಿದ.

"ಪತ್ತೆದಾರನಿಗೂ ವಕೀಲನಿಗೂ ಇರುವ ವ್ಯತ್ಯಾಸವಿದು, ರಮಾನಂದ್. ಚತುರನಾದ ಪತ್ತೇದಾರ ತಾನು ಕಂಡ ಯಾವ ವಿಷಯವನ್ನೇ ಆಗಲಿ ಇದು ನನಗೆ ಸಂಬಂಧಿಸಿದ್ದಲ್ಲ ಎಂದು ಉಪೇಕ್ಷಿಸುವಂತಿಲ್ಲ. ಯಾವ ಹುತ್ತದಲ್ಲಿ ಎಂತಹ ಹಾವಿಧೆಯೋ, ಅಥವಾ ಎಂತಹ ಹುತ್ತದಲ್ಲಿ ಯಾವ ಹಾವಿಧೆಯೋ?"

ಎಂದು ಕೆಳಗುರುಳಿದ್ದ ಸೂಟ್ ಕೇಸನ್ನು ತೆಗೆದು ನೋಡಿದ. ಅದು ಆಕಾರದಲ್ಲಿ ಚಿಕ್ಕದಾದರೂ ಭಾರವಾಗಿತ್ತೆಂದು ಹಿಂದೆ ಹೇಳಿದೆ. ಈಗ ಅದರ ಕಾರಣ ಪ್ರಕಟವಾಯಿತು. ಚೂರಿಯಿಂದ ಮೇಲಿನ ಚರ್ಮದ ಹೊದ್ದಿಕೆಯ ಒಂದು ಭಾಗ ಕತ್ತರಿಸಲ್ಪಟ್ಟು ಒಳಗಿದ್ದ ಕಬ್ಬಿಣ ಕಾಣುತ್ತಿತ್ತು. ಚರ್ಮದ ಹೊದ್ದಿಕೆಯನ್ನು ಕಾಮೇಶ್ ಸಂಪೂರ್ಣವಾಗಿ ಹರಿದ. ಅದೊಂದು ಪೋರ್ಟಬಲ್ ಕಬ್ಬಿಣದ ಪೆಟ್ಟಿಗೆಯಂತೆ ಕಂಡಿತು. ಸರಪಣಿಯನ್ನು ಅದಕ್ಕೆ ಜೋಡಿಸಿತ್ತು. ಕಾಮೇಶ್ ಪೆಟ್ಟಿಗೆಯನ್ನು ಎಚ್ಚರದಿಂದ ಪರೀಕ್ಷಿಸಿದ. ಸೂಜಿಯ ಮೊನೆಗೂ ಸ್ಥಳವಿಲ್ಲದಂತೆ ಖಚಿತವಾಗಿ ಮುಚ್ಚಳ ಜೋಡಿಸಲ್ಪಟ್ಟಿತ್ತು. ಒಂದು ಕಡೆ ಅರ್ಧ ರೂಪಾಯಿ ಅಗಲದ ಸಣ್ಣ ನಾಲ್ಕು ನಂಬರುಗಳ ಬೀಗ.

"ಬುದ್ಧಿವಂತನಾದ ಶಿಲ್ಪಿ ಇದನ್ನು ತಯಾರಿಸಿದ್ದಾನೆ. ಕನ್ನಗತ್ತರಿ, ಇಕ್ಕಳ, ಶ್ರವಣಗಳೊಂದೂ ಇದಕ್ಕೆ ಉಪಯೋಗವಿಲ್ಲ. ಬೀಗ ಹಾಕಿದ ಸಂಖ್ಯೆ ಯಿಂದಲೇ ಇದನ್ನು ತೆರೆಯುವುದು ಸಾಧ್ಯ."

"ಆ ಸಂಖ್ಯೆಯನ್ನು ಪತ್ತೆ ಹಚ್ಚುವುದು ಪತ್ತೆದಾರನಿಗೆ ಸಾಧ್ಯವಿಲ್ಲವೆ?"

"ಒಂದು ವಾರ ಅದಕ್ಕಾಗಿಯೇ ಕುಳಿತುಕೊಂಡರೆ ಸಾಧ್ಯವಾಗಬಹುದು. ಅಷ್ಟು ಅವಕಾಶ ಈಗೆಲ್ಲಿದೆ ನಮಗೆ? ಅಷ್ಟೊಂದು ಶ್ರಮವಹಿಸಲು ಪೆಟ್ಟಿಗೆ ಯಲ್ಲೇನಿದೆಯೋ ಯಾರು ಬಲ್ಲರು?"

"ನೀನು ಹುಡುಕುತ್ತಿರುವ ರತ್ನಹಾರ."

ರಮಾನಂದ್ ನಗುತ್ತಾ ಹೇಳಿದ.

ಕಾಮೇಶನಿಗೂ ನಗು ಬಂತು. ಗೆಳೆಯನ ನಿರಾಶೆ ಬೇಸರಗಳು ಪರಿಹಾರವಾಗಿ ಮನಸ್ಸು ತಿಳಿಯಾಗುತ್ತಿದೆ ಎಂದು ತಿಳಿದು ಅವನು ಹೇಳಿದ: "ರತ್ನ ಹಾರವಲ್ಲದಿದ್ದರೆ ಅದರಷ್ಟೇ ಅಮೂಲ್ಯವಾದ ಬೇರೇನೋ ವಸ್ತು ಇದರಲ್ಲಿದೆ. ಈಗ ನನಗೆ ಸೇತುವೆಯ ಮೇಲಿನ ಘಟನೆ ಅರ್ಥವಾಗುತ್ತಿದೆ. ಈ ಪೆಟ್ಟಿಗೆಗಾಗಿಯೇ ನಾಗರಿಕನ ಮೇಲೆ ಆಕ್ರಮಣ ನಡೆದದ್ದು. ಅವನ ಕೊಲೆಯೂ ಆ ಕಾರಣದಿಂದಲೇ."

"ಸೇತುವೆಯ ಮೇಲೆ ಆಕ್ರಮಣ ಮಾಡಿದವರೇ ಹಿಂಬಾಲಿಸಿ ಬಂದು ಕೊಲೆ ಮಾಡಿರಬಹುದೇ?" ರಮಾನಂದ್ ಹೇಳಿದ.

"ಜಲಸಮಾಧಿಯಿಂದ ಅವರು ಎದ್ದು ಬಂದಿದ್ದರೆ ನೆಲದ ಮೇಲೆ, ಹಾಸಿಗೆಯ ಮೇಲೆ ಕೆಸರಿನ ಗುರುತಿರುತಿತ್ತು. ಇದು ಆ ಗುಂಪಿನ ಕೃತ್ಯವಲ್ಲ. ಅವರ ಪ್ರತಿಪಕ್ಷದ ಮತ್ತೊಂದು ಗುಂಪು ಕೊಲೆ ನಡೆಸಿದೆ."

"ಹಾಗಾದರೆ ಈಗ ಎರಡು ಕಳ್ಳರ ಗುಂಪುಗಳ ಕಣ್ಣು ನಮ್ಮ ಮೇಲಿದೆ."

"ಹೌದು, ಆದ್ದರಿಂದಲೆ ನಾವು ಈ ಪೆಟ್ಟಿಗೆಯನ್ನು ಮೊದಲು ಭದ್ರಪಡಿಸಬೇಕು."

ಎಂದು ಹೇಳಿ ಕಾಮೇಶ್ ಕೋಣೆಯ ಮೂಲೆಯಲ್ಲಿದ್ದ ತನ್ನ ಟ್ರಂಕ್‌ನಿಂದ ಕರಿಯ ರೇಷ್ಮೆ ಚೀಲವೊಂದನ್ನು ಹೊರಗೆ ತೆಗೆದ. ಅದರಲ್ಲಿ ಚೋರ ಶಿಖಾಮಣಿಯಂತೆ ಚತುರನಾದ ಪತ್ತೆದಾರನಿಗೂ ಅಗತ್ಯವಾದ ಅನೇಕ ಯಂತ್ರ, ಸಾಧನ, ಉಪಕರಣಗಳು ಸಂಗ್ರಹಿಸಲ್ಪಟ್ಟಿದ್ದವು. ಚೂರಿಯಂತೆ ಹರಿತವಾಗಿದ್ದ ಸಣ್ಣ ಅರವೊಂದನ್ನು ತೆಗೆದು ಕ್ಷಣಕಾಲ ಯೋಚಿಸಿ ಪುನಃ ಒಳಗಿಟ್ಟು ಗಾಜಿನ ಮುಚ್ಚಳ ಹಾಕಿದ್ದ ಸೀಸೆಯೊಂದನ್ನು ಹೊರಗೆ ತೆಗೆದು ಅದರಲ್ಲಿದ್ದ ಹಳದಿ ಬಣ್ಣದ ದ್ರವದ ಎರಡು ತೊಟ್ಟುಗಳನ್ನು ಗಾಜಿನ ಕಡ್ಡಿಯಿಂದ ತೆಗೆದು ಪೆಟ್ಟಿಗೆಗೆ ಸರಪಳಿ ಜೋಡಿಸಲ್ಪಟ್ಟಿದ್ದ ಸ್ಥಳದಲ್ಲಿಟ್ಟು "ಇದೊಂದು ಸರ್ವಭಕ್ಷಕ ದ್ರಾವಕ. ಹೈಡ್ರೊ ಫ್ಲೋರಿಕ್ ಆಸಿಡ್ ಎಂತ ಅದರ ಹೆಸರು. ನೀನು ವಕೀಲೀ ಗೀಲಿಗೆ ಬೀಳದೆ ಬಿ. ಎಸ್‌ಸಿ. ಓದಿದ್ದರೆ ಅದರ ಗುಣ ತಿಳಿಯುತ್ತಿದ್ದೆ" ಎಂದನು.

"ಆದರಿಂದ ಕಬ್ಬಿಣದ ಪೆಟ್ಟಿಗೆ ತೆಗೆಯಲಾಗುವುದಿಲ್ಲವೆ?"

"ದ್ರಾವಕವಲ್ಲಿ ದಿನವೆಲ್ಲ ಮುಳುಗಿಸಿಟ್ಟರೂ ಪೆಟ್ಟಿಗೆ ಕರಗುವುದಿಲ್ಲ. ವಿಶೇಷ ರೀತಿಯಿಂದ ತಯಾರಿಸಿ ಹದ ಮಾಡಿದ ಲೋಹದಿಂದ ಪೆಟ್ಟಿಗೆ ಮಾಡಿದೆ. ಆಟಂ ಬಾಂಬೊಂದನ್ನು ಅದರ ಮೇಲೆ ಸಿಡಿಸಿದರೂ ಪೆಟ್ಟಿಗೆ ಒಡೆಯುವುದಿಲ್ಲ ವೆಂದು ನನ್ನ ವಿಶ್ವಾಸ."

ದ್ರಾವಕದ ಸೀಸೆಯನ್ನು ಚೀಲದಲ್ಲಿಟ್ಟು ಸಿಗರೇಟ್ ಹತ್ತಿಸಿ, ಕಾಮೇಶ್ ಕೊಟಡಿಯಲ್ಲಿ ಶತಪಥ ತಿರುಗಾಡಲು ಪ್ರಾರಂಭಿಸಿದ, ಮಧ್ಯೆ ಮಧ್ಯೆ ನಿಂತು ಕಿವಿಯರಳಿಸಿ ಹೊರಗೇನಾದರೂ ಶಬ್ದವಾಗುವುದೇ ಎಂದು ಕೇಳುತ್ತಿದ್ದ.

ಒಂದೆರಡು ನಿಮಿಷಗಳು ಈ ರೀತಿ ಕಳೆದ ಮೇಲೆ ಕಾಮೇಶ್ ಹೇಳಿದ: "ನಾಗರಿಕನು ನನ್ನನ್ನು ಹೊಡೆಯಲು ಬಂದಾಗ ಸಂಧಿಯಲ್ಲಿ ಹೇಳಿದ ಮಾತು ಈಗ ನನಗೆ ಅರ್ಥವಾಗುತ್ತಿದೆ. "ನಾನು ಕಳ್ಳನಲ್ಲ. ನನ್ನನ್ನು ಬಿಟ್ಟು ಬಿಡು" ಎಂದು ಅವನು ಹೇಳಿದ್ದು. ನನ್ನನ್ನು ಪೋಲೀಸ್ ಅಧಿಕಾರಿಯೆಂದು ತಿಳಿದಿರ ಬಹುದಾಗಿ ಆಗ ನಾನು ಭಾವಿಸಿದೆ. ಅದು ತಪ್ಪು ಎಂದು ಈಗ ಅರಿವಾಗುತ್ತದೆ. ಕಳ್ಳನೊಬ್ಬನನ್ನು ಪೋಲೀಸರು ಹಿಡಿದಾಗ ಅವನು ಮೊದಲು ಏನು ಹೇಳು ತ್ತಾನೆ? "ನಾನು ಕಳ್ಳನಲ್ಲ ಬಿಡು ಎಂದಲ್ಲವೇ?" ಅವರು ಮೇಲೆ ಬಿದ್ದಾಗ ನಾಗರಿಕ ಕೂಗಿಕೊಳ್ಳದಿದ್ದದ್ದು, ಕಳ್ಳರ ಇನ್ನೊಂದು ಗುಂಪಿನವರು ನಮ್ಮ ಹಿಂದೆ ಬಂದು ಅವನನ್ನು ಕೊಂದದ್ದು ಈ ಕಾರಣದಿಂದಲೇ."

"ನೀನು ಹೇಳುವುದೇನು, ಕಾಮೇಶ್? ನನಗೊಂದೂ ಅರ್ಥವಾಗುತ್ತಿಲ್ಲ."

"ಕಾನೂನು ನಿಬಂಧನೆಗಳನ್ನು ನೆನಪಿಟ್ಟು ಕೊಳ್ಳುವುದರಲ್ಲಿ ವಕೀಲರ ಊಹಾಶಕ್ತಿ ಲೋಪವಾಗುವಂತಿದೆ. ನಿನಗಾಗಿ ಸರಳ ಭಾಷೆಯಲ್ಲಿ ಹೇಳುತ್ತೇನೆ ರಮಾನಂದ್. ನಾವು ನಾಗರಿಕನೆಂದು ಭಾವಿಸಿದ ಈ ವ್ಯಕ್ತಿ ನಿಜವಾಗಿ ನಾಗರಿಕನಲ್ಲ. ಕಳ್ಳ, ಈ ಪೆಟ್ಟಿಗೆಯನ್ನಪಹರಿಸಿ ಪಲಾಯನ ಮಾಡುತ್ತಿದ್ದಾಗ ಪೋಲೀಸ್ ಅಧಿಕಾರಿಗಳು ಹಿಂಬಾಲಿಸಿ ಆಕ್ರಮಣ ಮಾಡಿದರು. ನಾವು ಆ ಅಧಿಕಾರಿಗಳನ್ನು ದರೋಡೆಕೋರರೆಂದು ಭಾವಿಸಿ ಕಳ್ಳನ ಸಹಾಯಕ್ಕೆ ಹೋಗಿ ಪೋಲೀಸರನ್ನು ಹಳ್ಳಕ್ಕೆ ತಳ್ಳಿ, ಮಾಲು ಸಮೇತ ಕಳ್ಳನನ್ನು ಹೋಟೆಲಿನ

ಬಿಡಾರಕ್ಕೆ ತಂದು ಮಲಗಿಸಿದೆವು. ಆ ಗುಂಪಿನ ಇನ್ನೊಬ್ಬ ನಮ್ಮನ್ನು ಹಿಂಬಾಲಿಸಿ ಬಂದು ಕಳ್ಳನ ಬಾಯಿ ಮುಚ್ಚಿಸಲು ಚೂರಿಯಿಂದ ಇರಿದು ಕೊಂದನು. ಇದು ಇಲ್ಲಿಯವರೆಗೆ ನಡೆದಿರುವ ವಿಚಾರ"

ಕಾಮೇಶ್ ಈ ಮಾತು ಹೇಳುತ್ತಿದ್ದಂತೆ ರಮಾನಂದನ ಮುಖ ಬಿಳು ಪಾಯಿತು. ಭಯದಿಂದ ಗಂಟಲು ಕಟ್ಟಿತು. ಆಶ್ಚರಿಯ ದನಿಯಿಂದ ಅವನು ಹೇಳಿದನು: "ನಾನು ಇಲ್ಲಿಗೆ ಬಂದಾಗ ಸೂಪರಿಂಡೆಂಟರನ್ನು ನೋಡಿ ಅವರ ಸಹಾಯ ಕೇಳಬೇಕೆಂದು ಭಾವಿಸಿದ್ದೆ. ಇಲ್ಲಿ ಆದದ್ದೇನು? ಬಂದ ಕೆಲವು ಗಂಟೆಗಳೊಳಗಾಗಿ ಕಳ್ಳನೊಬ್ಬನ ಸಹಾಯಕ್ಕೆ ಹೋಗಿ ಮೂವರು ಪೋಲೀಸ್ ಅಧಿಕಾರಿಗಳನ್ನು ಹೊಡೆದು ಹಳ್ಳಕ್ಕೆ ತಳ್ಳಿದೆವು. ಇನ್ನು ಪೋಲೀ ಸರು, ಕಳ್ಳರ ಗುಂಪು ಇಬ್ಬರೂ ನಮ್ಮ ಬೆನ್ನು ಹತ್ತುತ್ತಾರೆ. ಬೆಳಕು ಹರಿಯು ವುದರಲ್ಲಿ ನಾವು ಇಲ್ಲಿಂದ ಕಾಲಿಗೆ ಬುದ್ಧಿ ಹೇಳಿದರೇ ಉಳಿದುಕೊಳ್ಳುವುದು."

ರಮಾನಂದನ ಈ ಪ್ರಲಾಪ ಕೇಳುತ್ತಿದ್ದಂತೆ ಕಾಮೇಶನ ಮುಖದಲ್ಲಿ ಕುಹಕದ ನಗುವೊಂದು ಉದಯಿಸಿತು. ಉಪಹಾಸದ ಕೃತಕ ಗಾಂಭೀರ್ಯ ದಿಂದ "ಆ ಕಳ್ಳರ ಗುಂಪು ಬೆಳಗಿನತನಕ ನಮಗೆ ಅವಕಾಶ ಕೊಡುವುದೇ ಎಂದು ನನ್ನ ಚಿಂತೆ. ಪೆಟ್ಟಿಗೆಯನ್ನು ಭದ್ರಪಡಿಸಿಕೊಂಡು ಮುಂದಿನ ಕಾರ್ಯ ವನ್ನು ಯೋಚಿಸೋಣ" ಎಂದು ಹೇಳಿ ದ್ರಾವಕ ಹಚ್ಚಿದ ಕಡೆ ಸರಪಣಿಯನ್ನು ಆಡಿಸಿ ಪೆಟ್ಟಿಗೆಯನ್ನು ಎಳೆದನು. ಆಸಿಡ್ ತನ್ನ ಕೆಲಸ ಮಾಡಿತ್ತು. ಪೆಟ್ಟಿಗೆ ಕಳಚಿ ಕೈಗೆ ಬಂದಿತು. ದಕ್ಷನಾದ ಸರಾಪ್ ಹಣದ ಚೀಲವೆತ್ತಿ ಕೈಯಿಂದ ತೂಕ ನೋಡುವಂತೆ ಪೆಟ್ಟಿಗೆಯನ್ನೊಂದು ಸಾರಿ ತೂಗಿಸಿ ಮೆಲ್ಲನೆ ಮೇಜಿನ ಮೇಲಿಟ್ಟು ಮಾತು ಮುಂದುವರಿಸಿದನು.

"ನಾನು ಹೇಳುವುದರಲ್ಲಿ ಸ್ವಲ್ಪವೂ ಉತ್ಪ್ರೇಕ್ಷೆಯಿಲ್ಲ, ಬೇಕೆಂದೋ ಬೇಡ ವೆಂದೋ ನಾವು ಸಿಂಹದ ಗುಹೆಯನ್ನು ಪ್ರವೇಶಿಸಿದ್ದೇವೆ. ನೀರಿಗೆ ಬಿದ್ದ ಪೋಲೀಸ್ ಅಧಿಕಾರಿಗಳು ಇಷ್ಟು ಹೊತ್ತಿಗೆ ಜಳಕ ಮುಗಿಸಿಕೊಂಡು ನಮ್ಮನ್ನು ಹುಡುಕಲು ಪ್ರಾರಂಭಿಸಿರಬೇಕು. ಮಾಲು ನಮ್ಮಲ್ಲಿರುವುದರಿಂದ ಕಳ್ಳರ ಗುಂಪು ನಮಗಾಗಿ ಹೊಂಚು ಹಾಕುತ್ತಿದೆಯೆಂಬುದು ನಿಸ್ಸಂದೇಹ. ನಾಗರಿಕನ

ಮೃತ್ಯು ಆ ಗುಂಪಿನವರ ಕೈ ಚಳಕ ಮತ್ತು ಕಾರ್ಯಚಾತುರ್ಯಕ್ಕೆ ನಿದರ್ಶನ. ನಮಗಿನ್ನು ಹೆಚ್ಚು ಅವಕಾಶ ಉಳಿದಿಲ್ಲ. ಪ್ರತಿಕ್ಷಣದಲ್ಲಿಯೂ ನಾನು—"

ಎನ್ನುತ್ತಾ ಕ್ಷಣಕಾಲ ಮಾತು ನಿಲ್ಲಿಸಿ ಕಿವಿಗೊಟ್ಟು ಕೇಳಿದ. ಮೆಲ್ಲನೆ ಯಾರೋ ಬಾಗಿಲು ತಟ್ಟುತ್ತಿದ್ದಂತೆ ಕೇಳಿಸಿತು. ಕ್ರಮಕ್ರಮವಾಗಿ ಶಬ್ಧ ಹೆಚ್ಚಿತು. ಆದರೂ ಕಾಮೇಶ್ ಚಲಿಸದೆ ಧೈರ್ಯಗುಂದದೆ ಹಿಂದಿನಂತೆ ಸ್ಥಿರ ಕಂಠದಿಂದ ಹೇಳಿದ.

"ಪ್ರತಿ ಕ್ಷಣದಲ್ಲಿ ನಾನು ಶತೃಗಳ ಆಕ್ರಮಣ ನಿರೀಕ್ಷಿಸುತ್ತಿದ್ದೇನೆ."

"ಯಾರಿರಬಹುದು? ಪೋಲೀಸಿನವರೇ? ನಾಗರಿಕನ ಕಡೆಯವರೇ? ಕಳ್ಳರ ಗುಂಪಿನವರೆ?"

ರಮಾನಂದ್ ದನಿ ತಗ್ಗಿಸಿ ಪ್ರಶ್ನಿಸಿದ.

ಕಾಮೇಶನ ಮುಖದಲ್ಲಿ ನಗು ಅಳಿಸಲಿಲ್ಲ. "ತಿಳಿಯಲು ಹೆಚ್ಚು ಹೊತ್ತು ಉಳಿದಿಲ್ಲ" ಗಂಭೀರವಾಗಿ ಉತ್ತರ ಕೊಟ್ಟ. ಅವನ ಕೈಯಲ್ಲಿ ಸಣ್ಣ ಪಿಸ್ತೂಲೊಂದು ಮಿರುಗುತ್ತಿತ್ತು. ಮುಚ್ಚಳ ಹಿಂದಕ್ಕೆ ತಳ್ಳಿ ಪಿಸ್ತೂಲು ಸಹಿತವಾದ ಕೈಯನ್ನು ಅಂಗಿಯ ಕಿಸೆಯಲ್ಲಿಟ್ಟುಕೊಂಡು ಬಾಗಿಲ ಹತ್ತಿರ ಹೋದ. ಶಬ್ದ ನಿಂತಿತು. ಬಾಗಿಲು ತೆರೆಯಬೇಕೇ ಬೇಡವೇ? ಹೊರಗೆ ಬಾಗಿಲು ತಟ್ಟುತ್ತಿದ್ದವರು ಅವಸರದಲ್ಲಿದ್ದಂತೆ ಕಾಣಲಿಲ್ಲ. ತಬಲದ ಮೇಲೆ ಟೇಕ ಹೊಡದಂತೆ ಲಯ ಬದ್ಧವಾಗಿ ಹಗುರವಾದ ಕೈಯಿಂದ ತಟ್ಟುತ್ತಿದ್ದರು. ಹಠಾತ್ತಾಗಿ ಶಬ್ಧ ನಿಂತದ್ದು ಕೊಟಡಿಯಲ್ಲಿದ್ದವರನ್ನು ಚಕಿತಗೊಳಿಸಿತು.

ಆಗ ಕೊಟಡಿಯ ಹಿಂಭಾಗದಲ್ಲಿ ಸ್ನಾನ ಗೃಹಕ್ಕೆ ಹೋಗುವ ಬಾಗಿಲ ಬಳಿಯಿಂದ ಅಪರಿಚಿತ ಕಂಠವೊಂದು ಕೇಳಿಸಿತು.

"ದುಡುಕಿ ಏನನ್ನೂ ಮಾಡಬಾರದು ಚೌದುರಿ ಸಾಹೇಬರೇ"—ಎಂದು.

ಕಾಮೇಶ್ ಯಂತ್ರದಂತೆ ಘಟಕ್ಕನೆ ಹಿಂದಕ್ಕೆ ತಿರುಗಿನೋಡಿದನು. ಸ್ನಾನ ಗೃಹದ ಹತ್ತಿರ, ಆಂಗ್ಲ ಉಡುಪು ಧರಿಸಿದ ಮಧ್ಯಮ ವಯಸ್ಸಿನ ಅಪರಿಚಿತನೊಬ್ಬನು ನಿಂತಿದ್ದಾನೆ. ದೀಪದ ಬೆಳಕು ಅವನ ಮುಖದ ಮೇಲೆ ಬಿದ್ದು

ಅವನ ಅಸ್ಫುಟ ಮಂದಹಾಸವನ್ನು ಬೆಳಗಿಸುತ್ತಿದೆ. ಚಿನ್ನದ ಹಿಡಿಯ ಸಣ್ಣ ವೇತ್ರದ ಹೊರತಾಗಿ ಅವನ ಕೈಯಲ್ಲಿ ಮತ್ತಾವ ಆಯುಧವೂ ಇರಲಿಲ್ಲ. ಕಾಮೇಶ್ ಕೆಲವು ಕ್ಷಣಗಳು ಸ್ತಂಭಿತನಾಗಿ ನಿಂತು ಬಿಟ್ಟನು. ಬಾಯಿಂದ ಮಾತು ಹೊರಡಲಿಲ್ಲ. ಅನಂತ ರಮಾನಂದ್ ಮತ್ತು ಪ್ರಮೀಳೆಯ ಆಶ್ಚರ್ಯ ಭಾವ ಇಮ್ಮಡಿಯಾಗಿ ಬೆಚ್ಚಿ ನಿಲ್ಲುವಂತೆ ಗಟ್ಟಿಯಾಗಿ ನಗುವುದಕ್ಕೆ ಪ್ರಾರಂಭಿಸಿದನು. ನಗುವಿನ ಲಹರಿ ಶಾಂತವಾದ ಮೇಲೆ ಅವನ ಬಾಯಿಂದ ಮಾತು ಹೊರಟಿತು.

"ನವಾಬ್ ಜಾದಾ ಯಾಕೂಬ್ ಹಸನ್! ನಿಮ್ಮನ್ನಿಲ್ಲಿ ನೋಡುವುದಾಗಿ ನಾನು ಕನಸಿನಲ್ಲಿಯೂ ಭಾವಿಸಿರಲಿಲ್ಲ."



## ಎಂಟನೆಯ ಪರಿಚ್ಛೇದ

ಥಳಥಳಿಸುವ ವಜ್ರದುಂಗುರದಿಂದ ಮಿರುಗುತ್ತಿದ್ದ ನೀಳವಾದ ಬೆರಳುಗಳಿಂದ ಬಟುವಾಗಿ ತಿದ್ದಿ ತೆಗೆದ ಮೀಸೆಯನ್ನು ಸವರಿಕೊಳ್ಳುತ್ತ ಬಾದಷಾಹೀ ಸಂಸ್ಕೃತಿಗೆ ಅನುಗುಣವಾಗಿ ಅಚ್ಚ ಉರ್ದೂ ಭಾಷೆಯಲ್ಲಿ ನವಾಬ್ ಜಾದಾ ನುಡಿದನು.

"ಮೆಹರ್‌ಬಾನ್! ಮೆಹರ್‌ಬಾನ್! ನಿಮ್ಮನ್ನು ನೋಡಿದ್ದೂ ನನಗಷ್ಟೇ ಆಶ್ಚರ್ಯ, ಮಿಸ್ಟರ್ ಚೌದರಿ. ಬೊಂಬಾಯ್ ನಗರದ ನಾಗರಿಕ ಜನ ಸಾಂದ್ರತೆಯಲ್ಲಿ ಬೆಳೆದ ನಿಮಗೆ ರಾಜಕೋಟೆಯ ಅನಾಗರಿಕತೆ ರುಚಿಸುವುದೇ? ಒಳ್ಳೆಯ ಹೋಟೆಲುಗಳಿಲ್ಲ. ಥಿಯೇಟರುಗಳಿಲ್ಲ. ನೃತ್ಯಶಾಲೆಗಳಿಲ್ಲ.

ಪ್ರಾಂತೀಯ ಮುಖ್ಯ ನಗರವಾದರೂ ಹಳ್ಳಿಗೆ ಹಳ್ಳಿಯೂ ಅಲ್ಲ. ಪಟ್ಟಣಕ್ಕೆ ಪಟ್ಟಣವೂ ಅಲ್ಲ."

ಕಾಮೇಶನ ನೆನಪು ಎರಡು ವರ್ಷ ಹಿಂದಕ್ಕೆ ಹರಿಯಿತು. ಮಹಾಲಕ್ಷ್ಮಿಯಲ್ಲೊಂದು ದಿನ ಬುಕ್ಕಿಯೊಬ್ಬನ ಮೋಸವನ್ನು ಪತ್ತೆಹಚ್ಚುವ ಸಂದರ್ಭದಲ್ಲಿ ಕಾಮೇಶನಿಗೆ ನವಾಬ್ ಜಾದನ ಪರಿಚಯವಾದದ್ದು. ಕೆಲವು ದಿನಗಳು ತಡೆಯಿಲ್ಲದೆ ನಡೆದ ಮೇಲೆ ಆ ಮೋಸ ರೇಸ್ ಕ್ಲಬ್ಬಿನ ಗಮನಕ್ಕೆ ಬಂದು ಅವರೇ ಚೌಧುರಿಯನ್ನು ಕರೆಸಿಕೊಂಡಿದ್ದರು. ಯಾವುದಾದರೊಂದು ಕುದುರೆ ಗೆದ್ದು ಮೂರು ಅಂಕಿಯ ಡಿವಿಡೆಂಟ್ ಕೊಟ್ಟರೆ, ಆ ಕುದುರೆಯ ಮೇಲಿನ ಟಿಕೆಟ್ಟುಗಳೆಲ್ಲಾ ಒಬ್ಬ ಬುಕ್ಕಿಯ ಕೈಯಲ್ಲಿರುತಿತ್ತು. ಇದರ ರಹಸ್ಯವನ್ನು ಭೇದಿಸಿ ಪಂಟರುಗಳಿಗೆ ಆಗುತ್ತಿದ್ದ ಅನ್ಯಾಯವನ್ನು ಸರಿಪಡಿಸುವುದು ಆ ಸಂದರ್ಭದಲ್ಲಿ ಕಾಮೇಶನ ಕೆಲಸವಾಗಿತ್ತು. ಆ ತೊಡಕನ್ನು ಬಿಡಿಸಿ ಮೋಸದಲ್ಲಿ ಸೇರಿದ್ದ ಬುಕ್ಕಿಗಳ ಗ್ಯಾಂಗನ್ನು ಚದುರಿಸುವುದರಲ್ಲಿ ನವಾಬ್ ಜಾದಾ ಕಾಮೇಶನಿಗೆ ಸಹಾಯಕನಾದ. ಆದರೂ ನವಾಬನೇ ಆ ಮೋಸಗಾರರ ಗುಂಪಿನ ನಾಯಕನಾಗಿರಬಹುದೇ ' ಎಂಬ ಸಂದೇಹ ಮಾತ್ರ ಕಾಮೇಶನ ಮನಸ್ಸಿನಿಂದ ದೂರವಾಗಿರಲಿಲ್ಲ. ಈಗ ಈ ಸಮಯದಲ್ಲಿ ಆ ವ್ಯಕ್ತಿ! ಕಳ್ಳರ ಗುಂಪಿಗೂ ಅವನಿಗೂ ಸಂಬಂಧವಿಧೆಯೇ? ನಾಗರಿಕನ ಮರಣಕ್ಕೆ ಅವನ ಅನುಯಾಯಿಯೊಬ್ಬನು ಕಾರಣನಾಗಿರಬಹುದೇ? ಆ ಸಂದೇಹಗಳನ್ನು ಸದ್ಯದಲ್ಲಿ ಬದಿಗಿಟ್ಟು ಸಮಯ ಸಂಜೀವಿಯಂತಿದ್ದ ಮಿದು ನಗೆಯೊಂದನ್ನು ಮುಖದ ಮೇಲೆ ಆಡಿಸುತ್ತಾ ಕಾಮೇಶ್ ಹೇಳಿದನು.

"ನಾವು ಹೋದ ಕಡೆಯಲ್ಲೆಲ್ಲಾ ಬೊಂಬಾಯ್ ನಗರದ ಸೌಕರ್ಯವನ್ನು ಬಯುಸಿದರೆ ಸಿಕ್ಕುವುದೇ ನವಾಬ್ ಸಾಹೇಬ್? ನಾವು ರಾಜಕೋಟೆಗೆ ಬಂದು ಇನ್ನೂ ಕೆಲವು ಗಂಟೆಗಳಾಗಿಲ್ಲ. ಅಷ್ಟರಲ್ಲಿ ನಿಮ್ಮಂತಹ ಶ್ರೀಮಂತ ಗೆಳೆಯರೊಬ್ಬರ ಭೇಟಿಯಾದದ್ದು ಅದೃಷ್ಟ. ಇವರಾರು ನಿನಗೆ ಗೊತ್ತೆ ರಮೇಶ್. ಜುನಾಗಡ್ ಸಂಸ್ಥಾನದ ಉತ್ತರಾಧಿಕಾರಿ, ಯುವರಾಜಾ ಸಾಹೇಬ್ ನವಾಬ್ ಜಾದಾ ಯಾಕೂಬ್ ಹಸನ್. ನನಗೆ ತುಂಬಾ ಪರಿಚಿತರು—ನವಾಬ್ ಜಾದಾ, ನಿಮಗೆ ನನ್ನ ಮಿತ್ರನ ಪರಿಚಯ ಮಾಡಿಸುವುದು ಅಗತ್ಯ. ರಮೇಶ್ ಎಂತ

ಹೆಸರು. ದೊಡ್ಡ ಫಿಲ್ಮ್ ಪ್ರಡ್ಯೂಸರ್. ಲೋಕೇಷನ್ ಹುಡುಕಿಕೊಂಡು ಬಂದಿದ್ದಾರೆ—ಏನು ಸಮಾಚಾರ? ಈ ಅವೇಳೆಯಲ್ಲಿ ಬಂದಿರಲ್ಲ, ನವಾಬ್ ಸಾಹೇಬ್!"

ಕಾಮೇಶನ ಮೆಚ್ಚು ನುಡಿಗಳು ನವಾಬನ ಮೇಲೆ ಯಾವ ಪರಿಣಾಮ ವನ್ನೂ ಉಂಟು ಮಾಡಲಿಲ್ಲ. ಕಾಮೇಶನ ಜೇಬಿನಲ್ಲಿದ್ದ ಕೈಯಲ್ಲಿ ಪಿಸ್ತೂಲಿದೆ ಯೆಂದೂ, ಅದು ನೇರವಾಗಿ ತನ್ನ ಮೇಲೇ ಗುರಿಯಿಡಲ್ಪಟ್ಟಿದೆಯೆಂದೂ ನವಾಬನು ಗಮನಿಸಿದನು. ಅವನು ಹಿಂದಿನಂತೆ ಗಂಭೀರ ಧ್ವನಿಯಿಂದ "ಪುನಃ ಎಚ್ಚರಿಸುತ್ತೇನೆ, ಚೌಧುರಿ. ದುಡುಕಿದರೆ ಅನರ್ಥವಾದೀತು. ನೀವಾಗಲೇ ಒಂದು ಶವಕ್ಕೆ ಉತ್ತರ ಹೇಳಬೇಕಾಗಿದೆ. ನಾನೂ ಅದರ ಸಂಗಡ ಸೇರಿದರೆ ನಿಮ್ಮ ಪತ್ತೇದಾರಿ ಚತುರತೆಯು ಕುಸಿಯುವಷ್ಟು ಭಾರವಾಗುವುದು ಖಂಡಿತ" ಎಂದನು.

"ಜೀವ ಸಹಿತರಾದ ಚೋರ ಶಿಖಾಮಣಿಗಳೊಡನೆ ಚೆಲ್ಲಾಟವಾಡುವುದು ನನ್ನ ದಿನಚರಿ, ನವಾಬರೇ? ಅಂತಹ ನಾನು ಶವಗಳಿಗೆ ಹೆದರುವೆನೇ? ಒಂಟಿ ಯಾಗಲಿ ಜೋಡಿಯಾಗಲಿ ಸಂತೋಷದಿಂದ ಸ್ವಾಗತಿಸುತ್ತೇನೆ. ಒಂದು ವಿಧ ದಲ್ಲಿ ನಾನು ರಾಜ ಕೋಟೆಗೆ ಬಂದಿರುವುದು ಶವ ಸಂಗ್ರಹಕ್ಕಾಗಿಯೇ ಎಂದು ನೀವು ಭಾವಿಸಬಹುದು. ಅದೇನೇ ಇರಲಿ, ಈ ನಾಗರಿಕನ ಕೊಲೆಗೆ ನಿಮ್ಮ ಗುಂಪಿನವನೊಬ್ಬನು ಕಾರಣನೆಂದು ನನಗೆ ಬಲವಾದ ಸಂದೇಹವಿದೆ."

"ನೀವು ಹೇಳಿದ್ದು ನಿಜ. ನನ್ನ ಕಡೆಯವನೊಬ್ಬನ ಅಚಾತುರ್ಯದಿಂದ ಈ ಕೃತ್ಯ ನಡೆಯಿತೆಂದು ಒಪ್ಪಿಕೊಳ್ಳುತ್ತೇನೆ. ಈ ಮನುಷ್ಯನನ್ನು ಹಿಂಬಾಲಿಸಿ ಎಲ್ಲಿ ಹೋಗುವನೋ ನೋಡಿ ಬರಬೇಕೆಂದು ಹೇಳಿ ಕಳುಹಿಸಿದ್ದೆ. ನನ್ನ ಆಜ್ಞೆಯ ವಿರುದ್ಧ ಅವನು ಈ ಕೆಲಸ ಮಾಡಿದ್ದಾನೆ."

"ಹಾಗೆಂದ ಮಾತ್ರಕ್ಕೆ ಮುಗಿಯಿತೇ, ನವಾಬರೇ? ಮನುಷ್ಯ ಪ್ರಾಣಕ್ಕೆ ಯಾವ ಮೂಲ್ಯವೂ ಇಲ್ಲವೇ ನಿಮ್ಮ ದೃಷ್ಟಿಯಲ್ಲಿ?"

"ಇಲ್ಲದೆ ಉಂಟೇ? ನೀವು ಮೃತನ ಸಹಾಯಕ್ಕೆ ಹೋಗದೆ ಇದ್ದಿದ್ದರೆ ಇಷ್ಟು ಹೊತ್ತಿಗೆ ಅವನು ಪೋಲೀಸ್ ಠಾಣೆಯಲ್ಲಿ ಸುರಕ್ಷಿತವಾಗಿರುತ್ತಿದ್ದ. ಸಹಾಯಕ್ಕೆ ಹೋಗಿ ನೀವು ಅವನ ಮರಣಕ್ಕೆ ಕಾರಣರಾದಿರಿ."

" ನಿಮ್ಮ ಕಡೆಯವರು ಮೃತನನ್ನು ಹಿಂಬಾಲಿಸಿ ಬಂದದ್ದೇಕೆ ?"

" ನಾನು ಆ ಪ್ರಶ್ನೆಗೆ ಉತ್ತರ ಕೊಡಬೇಕೆ?"

" ನನಗೆ ಉತ್ತರ ಕೊಡಲು ನೀವು ನಿರಾಕರಿಸಬಹುದು. ಆದರೆ ನಾಳೆ ಪೋಲೀಸ್ ಠಾಣೆಯಲ್ಲಿ—"

ಬೇಕೆಂದೇ ಕಾಮೇಶ್ ಮಾತು ಮುಗಿಸಲಿಲ್ಲ. ಸಭ್ಯ ಸಂಭಾಷಣೆಯ ಈ ನಾಟಕವನ್ನು ಹೆಚ್ಚುಕಾಲ ಮುಂದುವರಿಸುವುದು ಕಾಮೇಶನ ಇಚ್ಛೆ ಯಾಗಿರಲಿಲ್ಲ.

ಒಂದರೆಕ್ಷಣ ಮಾತ್ರ ನವಾಬನ ಹುಬ್ಬುಗಳು ಕುಂಚಿತವಾದವು. ಪ್ರತಿ ಕ್ಷಣದಲ್ಲಿ ಅವನು ಕೋಪ ತಡೆದು, ಕುಹಕದ ನಗೆಯನ್ನು ಬೀರಿ, ಉಪೇಕ್ಷೆಯ ಆಲಸ್ಯ ಕಂಠದಿಂದ ಹೇಳಿದನು: " ಸಿಂಹನ ಗುಹೆಯಲ್ಲಿ ಸಿಕ್ಕಿಬಿದ್ದ ನರಿ ಹೇಳಿತಂತೆ—ಮೃಗರಾಜ! ಮೃಗರಾಜ! ನಾನೇನೋ ಸಾಯುತ್ತೇನೆ. ಆದರೆ ನಾಳೆ ನನ್ನ ಭೂತ ಈ ಗುಹೆಯನ್ನು ಆಕ್ರಮಿಸಿಕೊಂಡು ನಿನ್ನನ್ನು ಹೊರ ದೂಡಿದರೆ ಏನು ಮಾಡುವೆ ?"—ಎಂದು.

" ಅದಕ್ಕೆ ಸಿಂಹ ಏನು ಉತ್ತರ ಕೊಟ್ಟಿತು ಗೊತ್ತೇ, ನವಾಬ್ ಜಾದಾ ?"

ನವಾಬನು ಉತ್ತರ ಕೊಡಲಿಲ್ಲ. ಕೈಯಲ್ಲಿ ಹಿಡಿದಿದ್ದ ಬೆತ್ತವನ್ನು ಆಡಿಸುತ್ತ ದುರುಗುಟ್ಟಿ ಕಾಮೇಶನನ್ನು ನೋಡಿದನು.

" ನಿಮಗೆ ಅದು ಮರೆತಿದ್ದರೆ ನಾನು ಹೇಳುತ್ತೇನೆ. ಮೃಗರಾಜ ನುಡಿದನು—ನೀನು ಭೂತವಾದರೆ ನಾನು ಭೂತಪತಿ. ನಾನು ಕೊಂದು ತಿಂದ ತೊಂಭತ್ತೊಂಭತ್ತು ಪ್ರಾಣಿಗಳು ಭೂತವಾಗಿ ಈ ಗುಹೆಯಲ್ಲಿವೆ. ನಿನ್ನನ್ನು ಮುಗಿಸಿ ಸಂಖ್ಯಾ ಪೂರಣ ಮಾಡುತ್ತೇನೆ—ಎಂದು".

ಹೇಳುತ್ತ ಹೇಳುತ್ತ ಕಾಮೇಶನ ದನಿ ಬಿರುಸಾಯಿತು.

" ಈ ಕಥೆಯ ಮೃಗರಾಜ ಕಾಮೇಶ್ ಚೌದುರಿಯಲ್ಲ, ನವಾಬ್ ಜಾದಾ ಎಂಬುದನ್ನೇ ನೀನು ಮರೆತಂತಿದೆ."

ಆಲಸ್ಯದ ಧ್ವನಿಯಿಂದ ನವಾಬ್ ಜಾದಾ ನುಡಿದನು.

"ನಾನು ಏನನ್ನೂ ಮರೆತಿಲ್ಲ, ನವಾಬ್ ಸಾಹೇಬ್. ಬೊಂಬಾಯಿಂದ ರಾಜಕೋಟೆಗೆ ಬಂದ ಮಾತ್ರಕ್ಕೆ ಮನುಷ್ಯ ಬದಲಾಯಿಸುತ್ತಾನೋ?"

"ಬದಲಾಯಿಸುವನೋ ಇಲ್ಲವೋ ಎಂಬುದನ್ನು ನಾಳೆ ತಿಳಿಯುವಿರಿ. ಆ ವಿಚಾರದಲ್ಲಿ ತರ್ಕ ಮಾಡುವ ಅವಕಾಶವಿಲ್ಲ ಈಗ ನನಗೆ. ನೀವು ನಾಗರಿಕ ನನ್ನು ಇಲ್ಲಿಗೆ ತಂದಾಗ ಅವನ ಕೈಯಲ್ಲೊಂದು ಪೆಟ್ಟಿಗೆಯಿತ್ತು. ಆ ಪೆಟ್ಟಿಗೆಯ ಮಾಲಿಕ ನಾನು, ಅದನ್ನು ತೆಗೆದುಕೊಂಡು ಹೋಗುವುದಕ್ಕಾಗಿಯೇ ನಾನು ಬಂದದ್ದು."

ಎಂದು ನವಾಬ್ ಜಾದಾ ಪೆಟ್ಟಿಗೆಯಿಟ್ಟಿದ್ದ ಮೇಜಿನ ಹತ್ತಿರ ಹೋದನು. ಆಗ ಕಾಮೇಶ್ ಜೇಬಿನಿಂದ ಪಿಸ್ತೂಲನ್ನು ಹೊರಗೆ ತೆಗೆದು ಗುರಿಯಿಟ್ಟು "ನಿಲ್ಲು ನವಾಬ್ ಜಾದಾ, ಒಂದು ಹೆಜ್ಜೆ ಮುಂದಿಟ್ಟರೆ ನಾಶವಾಗುತ್ತೀಯೆ" ಎಂದನು.

ಕ್ಷಣಕಾಲ ಕೊಟಡಿಯಲ್ಲಿ ನಿಶ್ಶಬ್ದ. ಆ ಮೇಲೆ ನವಾಬ್ ಹೇಳಿದನು. "ಇದು ನನ್ನ ಕೊನೆಯ ಎಚ್ಚರಿಕೆ, ಚೌದುರಿ. ಮೃತ್ಯು ಹತ್ತು ಮುಖದಿಂದ ನಿನ್ನೆದುರಿಗೆ ನಿಂತಿದೆ. ನನ್ನ ಮೇಲೆ ಪಿಸ್ತೂಲು ಹಾರಿಸುವ ಮೊದಲೆ ನೀನು ನೆಲಕ್ಕುರುಳುವೆ."

ಎಂದು ನವಾಬನು ನಿಶ್ಚಲನಾಗಿ ನಿಂತು ಕಿಡಿಗಳನ್ನುಗುಳುವ ಕಣ್ಣು ಗಳಿಂದ ಚೌದುರಿಯನ್ನು ನೋಡಿದನು. ಈ ಧೈರ್ಯ ಸ್ಥೈರ್ಯಗಳ ಅರ್ಥ ವೇನು? ನವಾಬನ ಕಡೆಯವರು ಆಯುಧಪಾಣಿಗಳಾಗಿ ಕೋಣೆಯ ಸುತ್ತ ಕಾವಲಿರಬಹುದೇ? ಈ ಪರಿಸ್ಥಿತಿಯಲ್ಲಿ ಪೆಟ್ಟಿಗೆಯನ್ನು ನವಾಬನಿಗೆ ಕೊಟ್ಟು ದುರಂತದಿಂದ ಪಾರಾಗುವುದೇ? ಅದು ತನ್ನ ಕೀರ್ತಿ ಪ್ರತಿಷ್ಠೆಗಳಿಗೆ ಕುಂದೆಂದೂ, ಹಾಗೆ ಮಾಡುವುದರಿಂದ ಪೆಟ್ಟಿಗೆಯ ರಹಸ್ಯವನ್ನು ಭೇದಿಸುವ ಅವಕಾಶ ತನಗೆ ತಪ್ಪಿ ಹೋಗಬಹುದೆಂದೂ ಕಾಮೇಶ್ ಭಾವಿಸಿದನು.

"ನಿಮ್ಮ ಕಣ್ಣುಗಳು ಅಗ್ನಿ ಪರ್ವತವಾಗಿ ಮಾರ್ಪಟ್ಟರೂ ನನ್ನನ್ನು

ಹೆದರಿಸಲಾರವು, ನವಾಬ್ ಜಾದಾ. ಬಂದ ದಾರಿಯಿಂದ ಹಿಂದಿರುಗುವ ಇಷ್ಟ ನಿಮಗಿಲ್ಲದಿದ್ದರೆ ಬಾಗಿಲಿಂದಲೆ ಹೊರಗೆ ಹೋಗಲು ನನ್ನ ಅಡ್ಡಿಯಿಲ್ಲ."

"ಪೆಟ್ಟಿಗೆಯ ಹೊರತು ನಾನಿಲ್ಲಿಂದ ಹೋಗುವುದಿಲ್ಲ."

ನವಾಬ್ ಉತ್ತರ ಕೊಟ್ಟನು.

"ಹಾಗಾದರೆ ಬಲಾತ್ಕಾರದಿಂದ ನಾನು ನಿಮ್ಮನ್ನು ಹೊರಗೆ ಕಳುಹಿಸ ಬೇಕಾಗುತ್ತದೆ."

ಎಂದು ಹೇಳಿ ಕಾಮೇಶ್ ಪಿಸ್ತೂಲನ್ನು ನವಾಬನ ಪಾರ್ಶ್ವಕ್ಕೆ ಹಿಡಿದು ಮುಂದೆ ಹೋಗುವಂತೆ ಸನ್ನೆಮಾಡಿದನು. ಆಗಲೂ ನವಾಬನು ಚಲಿಸಲಿಲ್ಲ. ಅವನ ಕಣ್ಣುಗಳು ಸ್ಥಿರ ದೃಷ್ಟಿಯಿಂದ ಮೇಜಿನ ಮೇಲಿಟ್ಟಿದ್ದ ಪೆಟ್ಟಿಗೆಯನ್ನು ನೋಡುತ್ತಿದ್ದವು.

ಆಗ ಹಠಾತ್ತಾಗಿ ತೋಟದ ಕಡೆಗಿದ್ದ ಕೊಟಡಿ ಬಾಗಿಲು ಶಬ್ಧವಾಯಿತು- ಕಾಮೇಶ್ ಹಿಂದಿರುಗಿ ನೋಡುವಷ್ಟರಲ್ಲಿ ಬಾಗಿಲ ಸಂದಿಯಿಂದ ಕೈಯೊಂದು ನುಸುಳಿ, ಪಾರ್ಶ್ವದಲ್ಲಿದ್ದ ವಿದ್ಯುದ್ದೀಪದ ಗುಂಡಿಯನ್ನು ಅದುಮಿತು. ಕೊಟಡಿ ಕತ್ತಲಾಯಿತು. ಪ್ರತಿ ಕ್ಷಣದಲ್ಲಿ ಪಿಸ್ತೂಲು ಹಾರಿಸಿದ ಶಬ್ಧವಾಗಿ ಭಾರವಾದ ವಸ್ತುವೊಂದು ಕೆಳಗುರುಳಿದಂತೆ ಕೇಳಿಸಿತು. ಕಾಮೇಶ್ ನವಾಬನನ್ನು ಹಿಡಿ ಯಲು ಕೈ ಚಾಚಿದನು. ನವಾಬ್ ಅಲ್ಲಿರಲಿಲ್ಲ. ಕಾಮೇಶ್ ಗೋಡೆಯ ಪಾರ್ಶ್ವಕ್ಕೆ ಹಾರಿ ಮೆಲ್ಲನೆ ಹೆಜ್ಜೆಯಿಡುತ್ತಾ ಬಾಗಿಲ ಕಡೆ ಹೋದನು. ಪಿಸ್ತೂಲು ಕೈಯಲ್ಲಿ ಅಣಿಯಾಗಿತ್ತು. ಬಾಗಿಲನ್ನು ತಲಪುತ್ತಲೆ ಗುಂಡಿಯನ್ನು ಅದುಮಿ ದೀಪ ಹತ್ತಿಸಿದನು.

ಅಪರಿಚಿತ ವ್ಯಕ್ತಿಯೊಬ್ಬನು ಕೊಟಡಿಯ ನಡುವೆ ಮೂಗು ಮಡಿಯಾಗಿ ಬಿದ್ದಿದ್ದಾನೆ. ರಮಾನಂದ್ ಅವನ ಕತ್ತನ್ನು ಅದುಮಿ ಹಿಡಿದಿದ್ದಾನೆ. ಪ್ರಮೀಳಾ ಸಮೀಪದಲ್ಲಿ ನಿಂತಿದ್ದಾಳೆ. ನವಾಬ್ ಜಾದಾ ಪೆಟ್ಟಿಗೆಯ ಸಮೇತ ಅದೃಶ್ಯನಾಗಿದ್ದಾನೆ. ಕಾಮೇಶ್ ಕ್ಷಣಾರ್ಧದಲ್ಲಿ ಕೊಟಡಿಯಲ್ಲಿ ಏನು ನಡೆಯಿ ತೆಂಬುದನ್ನು ಅರಿತುಕೊಂಡನು. ಕೂಡಲೆ ದೀಪವನ್ನು ಆರಿಸಿ "ರಮಾನಂದ್ ನಾನು ನವಾಬನ ಹಿಂದೆ ಹೋಗಿ ಪೆಟ್ಟಿಗೆಯನ್ನು ತರುತ್ತೇನೆ. ಪ್ರಮೀಳಾ,

ನೀನು ಅಲ್ಲಿಯವರೆಗೆ ಎಚ್ಚರವಾಗಿ ಇಲ್ಲಿಯೇ ಇರಿ" ಎಂದು ಹೇಳಿ ಆತುರದಿಂದ ಬಾಗಿಲನ್ನು ಹಾದು ಹೊರಗೆ ಹೋದನು.

ಹೊರಗೆ ಕಗ್ಗತ್ತಲು, ಜನರ ಸುಳಿವೂ ಇರಲಿಲ್ಲ. ತೋಟವನ್ನು ಹಾದು ಮರಗಳ ಮರೆಯಲ್ಲಿ ಹೋಟಲಿನ ಹೆಬ್ಬಾಗಿಲ ಬಳಿ ಬಂದನು. ಅಲ್ಲೊಂದು ಸಿಡಾನ್ ಕಾರ್. ಕಾರಿನ ಸಾರಥಿ ಬಾನೆಟ್ಟನ್ನು ತೆಗೆದು ಏನೋ ನೋಡುತ್ತಿದ್ದನು. ಒಳಗೆ ಕುಳಿತು ನವಾಬ್ ಜಾದಾ "ನಿನ್ನದು ಯಾವಾಗಲೂ ಈ ರಗಳೆ ಲತೀಪ್, ಅವಸರದ ಕೆಲಸವಿರುವಾಗಲೆ ಕಾರ್ ಕೆಡಿಸಿ ಬಿಡುತ್ತೀಯೆ" ಎಂದು ಹೇಳುತ್ತಿದ್ದನು.

ಸಾರಥಿ ಬಾನೆಟ್ಟನ್ನು ಮುಚ್ಚಿ ಕಾರಿನ ಬಳಿ ಬಂದು ಬಾಗಿಲು ತೆಗೆದುಕೊಂಡು ಒಳಗೆ ಹೋಗಿ ಕುಳಿತು ಕಾರು ಚಲಿಸಲು ಗುಂಡಿ ಹಾಕಿದನು. ಕಾಮೇಶ್ ಹೆಬ್ಬಾಗಿಲ ಗೋಡೆಯನ್ನು ಹತ್ತಿ ಕಾರು ಚಲಿಸಲು ಪ್ರಾರಂಭಿಸಿದಾಗ ಕಾರಿನ ಛಾವಣಿಯ ಮೇಲೆ ಹಾರಿದನು. ಕಾರು ಗೋಡೆಗೆ ಹೊಂದಿಕೊಂಡು ನಿಂತಿದ್ದುದರಿಂದಲೋ ಚಲಿಸುವ ಕಾರು ಎಂದಿಗಿಂತ ಹೆಚ್ಚು ಶಬ್ದಮಾಡಿದ್ದರಿಂದಲೋ ಕಾಮೇಶ್ ಹಾರಿದ ಶಬ್ದ ಒಳಗಿದ್ದವರಿಗೆ ಕೇಳಲಿಲ್ಲ.

ಕಾರು ಹೋಟಲನ್ನು ಬಿಟ್ಟು ಕಾಮೇಶನಿಗೆ ಅಪರಿಚಿತವಾದ ಬೇರೊಂದು ಮಾರ್ಗದಿಂದ ಹೊರಟು ಕೆಲವು ನಿಮಿಷಗಳೊಳಗಾಗಿ ನಗರವನ್ನು ದಾಟಿ ನಿರ್ಜನವಾದ ಛಾಟಾ ಮಾರ್ಗವೊಂದನ್ನು ಪ್ರವೇಶಿಸಿ ಗಂಟೆಗೆ ೪೦-೫೦ ಮೈಲಿಗಳ ತೀವ್ರ ವೇಗದಿಂದ ಪ್ರಯಾಣ ಮಾಡಿತು.

ಆಗಿನ ಪದ್ಧತಿಯಂತೆ ಕಾರಿನ ಛಾವಣಿಗೆ "ಕ್ಯಾರಿಯರ್" ಜೋಡಿಸಿದ್ದುದರಿಂದ ಕಾಮೇಶನಿಗೆ ಹೆಚ್ಚು ಕಷ್ಟವೇನೂ ಆಗಲಿಲ್ಲ. ಕಾಲುಗಳನ್ನು ಕಾರಿನ ಮುಖದ ಕಡೆಗೆ ಚಾಚಿ ಕ್ಯಾರಿಯರಿನ ಕಂಬಿಯನ್ನು ಕೈಯಿಂದ ಹಿಡಿದು ಕೆಳಗೆ ಬಾಗಿ ಕಿಟಕಿಯಿಂದ ನೋಡಿದ. ಕಾರಲ್ಲಿ ಸಣ್ಣ ವಿದ್ಯುದ್ದೀಪವೊಂದು ಉರಿಯುತ್ತಿದೆ. ಕಬ್ಬಿಣದ ಪೆಟ್ಟಿಗೆಯನ್ನು ತೊಡೆಯ ಮೇಲಿಟ್ಟುಕೊಂಡು ದಿಂಬುಗಳಿಗೆ ಒರಗಿ ಕಣ್ಣು ಮುಚ್ಚಿ ಕುಳಿತಿದ್ದಾನೆ ನವಾಬ್ ಜಾದಾ.

ದಾರಿಯಲ್ಲಿ ಏನೋ ಸಣ್ಣ ವಸ್ತುವೊಂದು ಚಕ್ರಕ್ಕೆ ಸಿಕ್ಕು ಶಬ್ದವಾಯಿತು. ಕಾಮೇಶ್ ಹಿಂದಕ್ಕೆ ಸರಿದು ಮೊದಲಿನಂತೆ ಕ್ಯಾರಿಯರಿನ ಕಂಬಿಗಳ ಮಧ್ಯೆ

ಮಲಗಿ ಯೋಚಿಸ ತೊಡಗಿದ: ಈ ಸಾಹಸದ ಕೊನೆಯಲ್ಲಿ? ಇದಕ್ಕಾಗಿಯೋ ತಾನು ರಾಜಕೋಟೆಗೆ ಬಂದದ್ದು? ಕಾರು ಎಲ್ಲಿಗೆ ಹೋಗುತ್ತಿದೆಯೋ ತಿಳಿಯದು. ಆಗಲೇ ನಗರದಿಂದ ಹೊರಗೆ ಇಪ್ಪತ್ತು ಮೂವತ್ತು ಮೈಲಿ ದೂರ ಬಂದಿರ ಬಹುದು. ದಾರಿಯ ಎರಡು ಕಡೆಯೂ ಸಾಲು ಮರಗಳು: ಅಲ್ಲಲ್ಲಿ ಕುರುಚಲು ಗಿಡದ ಪೊದೆಗಳು. ಸಮೀಪದಲ್ಲಿ ಗ್ರಾಮಗಳು ಕೂಡಾ ಇದ್ದಂತೆ ತಿಳಿಯಲಿಲ್ಲ.... ಹೋಟಲಲ್ಲಿ ರಮಾನಂದ್ ಪ್ರಮೀಳಾ ಗತಿಯೇನು? ಸಮಯಕ್ಕೆ ಸರಿಯಾಗಿ ಕೊಟಡಿಗೆ ಬಂದು ದೀಪ ಆರಿಸಿದ ವ್ಯಕ್ತಿ ನವಾಬನ ಕಡೆಯವನಲ್ಲವೆಂದು ಈಗ ಕಾಮೇಶನಿಗೆ ಖಂಡಿತವಾಯಿತು. ತನ್ನ ಕಡೆಯವನಾಗಿದ್ದರೆ ಆ ಸ್ಥಿತಿಯಲ್ಲಿ ಬಿಟ್ಟು ನವಾಬ್ ಬರುತ್ತಿದ್ದನೇ? ನಾಗರಿಕನನ್ನು ಚೂರಿ ಹಾಕಿ ಕೊಂದವರ ಗುಂಪಿಗೆ ಸೇರಿದವನಾಗಿರಬೇಕು ಆ ಅಪರಿಚಿತ ವ್ಯಕ್ತಿ. ತಾನು ಕೊಟಡಿ ಯನ್ನು ಬಿಟ್ಟಾಗ ರಮಾನಂದನ ಏಟಿನಿಂದ ಅವನು ಭೂಶಾಯಿಯಾಗಿದ್ದದ್ದು ನಿಜ. ಆದರೆ ಆ ತರುವಾಯ ಆ ಗುಂಪಿನ ಕಡೆಯ ಇತರರು ಅವನ ಸಹಾ ಯಕ್ಕೆ ಬಂದಿದ್ದರೆ? ರಮಾನಂದ್ ಮತ್ತು ಪ್ರಮೀಳಾ ಪರಿಸ್ಥಿತಿಯಿಂದ ಹೇಗೆ ಪಾರಾಗುವರು? ನಾಗರಿಕನ ಮೃತದೇಹ, ಒಬ್ಬ ಕಳ್ಳ ಬಂದಿ ಈ ಎರಡನ್ನೂ ರಮಾನಂದ ಮತ್ತು ಪ್ರಮೀಳೆಯ ತಲೆಯ ಮೇಲೆ ಹಾಕಿ ನವಾಬನನ್ನು ಹಿಂಬಾಲಿಸಿ ತಾನು ಬಂದದ್ದು ಸರ್ವಥಾ ಅವಿವೇಕವೆಂದು ಕಾಮೇಶನಿಗೆ ತೋರಿತು. ಮಾಡಿದ ಕೆಲಸ ಸರಿಯೋ ತಪ್ಪೋ ಈಗ ಅದರ ಫಲವನ್ನು ಅನುಭವಿಸಲೇಬೇಕು? ತಪ್ಪನ್ನು ತಿದ್ದುವುದು ಈಗ ತನ್ನಿಂದ ಸಾಧ್ಯವಲ್ಲ.

ಈ ಯೋಚನೆಯಲ್ಲಿ ಇನ್ನು ಅರ್ಧ ಗಂಟೆ ಕಳೆಯಿತು. ಕಾಮೇಶ್ ಆಕಾಶದಲ್ಲಿ ಬೆಳಗುತ್ತಿದ್ದ ನಕ್ಷತ್ರಗಳನ್ನು ನೋಡುತ್ತಾ ಒಂದೊಂದಾಗಿ ಗುರುತಿ ಸಲು ಪ್ರಯತ್ನಿಸುತ್ತಿದ್ದನು. ನಕ್ಷತ್ರಗಳನ್ನು ಎಣಿಸುವುದು ಯಾರಿಗೆ ಸಾಧ್ಯ? ಸಮುದ್ರ ತೀರದಲ್ಲಿನ ಮರಳು ಕಣಗಳನ್ನು ಎಣಿಸಿದಂತೆ. ಈ ವಿಶಾಲ ವಿಶ್ವದಲ್ಲಿ ಭೂಮಿಯೊಂದು ಮರಳು ಕಣ. ಆ ಕಣದಲ್ಲಿ ರಾಜಕೋಟೆಯ ಈ ಪ್ರದೇಶ ಸೂಜಿಯ ಮೊನೆಯಷ್ಟು ಸ್ಥಾನವನ್ನೂ ಆಕ್ರಮಿಸಲಾರದು. ಇನ್ನು ತಾನು, ತನಗೆ ಆಶ್ರಯವಾಗಿ ಓಡುತ್ತಿರುವ ವಾಹನ ಇವುಗಳಿಗೆ ಆ ವಿಶ್ವದಲ್ಲಿ ಸ್ಥಾನ ವಾದರೂ ಎಲ್ಲಿಯದು? ಆದರೂ ಕಾಮೇಶ್ ಚಿಂತಿಸಿದನು. ಈ ಅಸಂಖ್ಯಾತ ನಕ್ಷತ್ರಗಳನ್ನೊಳಗೊಂಡ ವಿಶಾಲ ವಿಶ್ವದ ಭವಿಷ್ಯ ಆ ಮರಳು ಕಣದ ಒಂದು

ಅದೃಶ್ಯ ಸ್ಥಾನದಲ್ಲಿ ಓಡುತ್ತಿರುವ ಕಾರಿನ ಮತ್ತು ಅದರ ಮೇಲಿರುವ ಮನುಷ್ಯ ಕೀಟದ ಜಾಗ್ರತಿಯನ್ನು ಅವಲಂಬಿಸಿದೆ. ಕಾರಿಗೆ ಅಪಾಯವಾಗಿ ತಾನು ಮಡಿದರೆ ತನ್ನೊಡನೆ ಆ ವಿಶ್ವವೂ ಮಡಿಯುವುದು—ಎಂದು.

ಭಾಟಾ ಮಾರ್ಗವನ್ನು ಬಿಟ್ಟು ಕಾರ್ ಅಷ್ಟೇನು ಪ್ರಶಸ್ತವಲ್ಲದ ಮತ್ತೊಂದು ಮಾರ್ಗವನ್ನು ಹಿಡಿಯಿತು. ಕುಲುಕುವುದು ಹೆಚ್ಚಿತು. ಮೇಲಿದ್ದ ಕಾಮೇಶ್ ಕ್ಯಾರಿಯರಿನ ಕಂಬಿಗಳನ್ನು ಇನ್ನೂ ಭದ್ರವಾಗಿ ಹಿಡಿದುಕೊಂಡನು. ಈ ರೀತಿ ಸ್ವಲ್ಪ ದೂರ ಹೋದ ಮೇಲೆ ಎದುರಿಗೆ ಕತ್ತಲಲ್ಲಿ ಎತ್ತರವಾಗಿ ಕಾಣು ತ್ತಿದ್ದ ಕೋಟೆಯ ಗೋಡೆಗಳು ಕಂಡವು. ಗೋಡೆಯಿಂದ ಸ್ವಲ್ಪ ದೂರದಲ್ಲಿ ಕಾರು ನಿಂತಾಗ ದೀಪಗಳ ಬೆಳಕಿನಿಂದ ಅದೊಂದು ಸಣ್ಣ ದುರ್ಗವೆಂದೂ ಪ್ರಾಚೀನ ಕಾಲದ ಎಲ್ಲ ದುರ್ಗಗಳಂತೆ ಅದಕ್ಕೂ ಅಗಳು, ಭತೇರಿ, ದಿಡ್ಡಿ ಬಾಗಿಲು ಮುಂತಾದವುಗಳಿದ್ದವೆಂದೂ ಕಾಮೇಶನಿಗೆ ಗೋಚರವಾಯಿತು.

ಕಾರಿನ ಶಬ್ದ ಕೇಳುತ್ತಲೇ ದುರ್ಗದ ಮಹಾದ್ವಾರದಿಂದ ಸೇವಕ ನೊಬ್ಬನು ಓಡಿ ಬಂದನು. ಕಾರಿನ ಪ್ರಕಾಶಮಯವಾದ ದೀಪಗಳ ಬೆಳಕಿನಲ್ಲಿ ಮೇಲೆ ಮನುಷ್ಯನಿರುವುದನ್ನು ಸೇವಕನು ನೋಡಲಿಲ್ಲ. ಅವನು ಕಾರಿನ ಹತ್ತಿರ ಬಂದು ಒಳಗಿರುವವರು ಯಾರೆಂಬುದನ್ನು ತಿಳಿದುಕೊಂಡು ಹಿಂದಿರುಗಿ ಮಹಾದ್ವಾರವನ್ನು ಪೂರ್ತಿಯಾಗಿ ತೆರೆದು ದುರ್ಗದ ಒಳಭಾಗಕ್ಕೆ ಸುದ್ದಿ ಕೊಡಲು ಓಡಿದನು. ಕಾರು ಮಹಾದ್ವಾರವನ್ನು ಪ್ರವೇಶಿತು.

ಮಹಾದ್ವಾರ ಆನೆಯ ಮೇಲೆ ಅಂಬಾರಿ ಹಾಕಿಕೊಂಡು ಹೋಗುವಷ್ಟು ಎತ್ತರವಾಗಿದ್ದರೂ ಅಗಲ ಹೆಚ್ಚಿಗಿರಲಿಲ್ಲ. ದ್ವಾರದ ಎರಡು ಕಡೆಯೂ ಗೋಡೆಯ ಅಂಚಿನಲ್ಲಿ ಒಂದರ ಮೇಲೊಂದರಂತೆ ಎರಡು ಸಣ್ಣ ಹಜಾರಗಳು. ದುರ್ಗದ ಮೇಲೆ ಆಕ್ರಮಣ ನಡೆದಾಗ ಸೈನಿಕರ ರಕ್ಷಣೆಗಾಗಿ ಅವು ಕಟ್ಟಲ್ಪ ಟ್ಟಿದ್ದವು. ಕಾರು ದ್ವಾರವನ್ನು ಪ್ರವೇಶಿಸುತ್ತಿದ್ದಂತೆ ಕಾಮೇಶ್ ಪಾರ್ಶ್ವದ ಹಜಾರಕ್ಕೆ ಹಾರಿ ಕಂಭಗಳ ಮರೆಯಲ್ಲಿ ಅದೃಶ್ಯನಾದನು. ನವಾಬನ ವಾಹನದ ಛಾವಣಿಯ ಮೇಲೆ ಅವನ ಪ್ರವೇಶ ಒಳಗಿದ್ದವರಿಗೆ ಅಗೋಚರವಾಗಿ ಹೇಗೆ ನಡೆಯಿತೋ ನಿಷ್ಕ್ರಮಣವೂ ಹಾಗೆಯೇ ಅಗೋಚರವಾಗಿ ನಡೆದು ಹೋಯಿತು. ಕಾರು ದುರ್ಗದ ಒಳಗೆ ಹೋಗಿ ಪಾರ್ಶ್ವದಲ್ಲಿದ್ದ ಪ್ರಾಸಾದದ

ಎದುರಿಗೆ ನಿಂತು ನವಾಬನು ಕೇಳಗೀಡನು. ತನ್ನ ಕಾರಲ್ಲಿ ತನ್ನ ಸಂಗಡ ತನ್ನ ಶತ್ರುವೊಬ್ಬನು ಬಂದನೆಂಬುದನ್ನು ಅವನು ಕನಸು ಮನಸಲ್ಲಿಯೂ ತಿಳಿದಿರಲಿಲ್ಲ.



# ಒಂಭತ್ತನೇ ಪರಿಚ್ಛೇದ

ಕಾಮೇಶ್ ಎಚ್ಚರದಿಂದ ಹೆಜ್ಜೆಯಿಡುತ್ತಾ ತಾನೆಲ್ಲಿರುವೆನೆಂಬುದನ್ನು ಅರಸತೊಡಗಿದನು. ಪಶ್ಚಿಮ ರಾಜಾಸ್ಥಾನ್ ಮತ್ತು ಸೌರಾಷ್ಟ್ರದ ಪ್ರಾಚೀನ ದುರ್ಗಗಳ ವಾಸ್ತುಶಿಲ್ಪದ ಮುಖ್ಯ ಲಕ್ಷಣಗಳನ್ನು ಅವನು ತಿಳಿದಿದ್ದನು. ಮಹಾದ್ವಾರದ ಪಾರ್ಶ್ವದ ಹಜಾರಗಳಿಂದ ಕೋಟೆಯ ಬತೇರಿ ಮತ್ತು ಗೋಡೆಯ ಮೇಲೆ ಹೋಗಲು ಮೆಟ್ಟಲುಗಳನ್ನು ಕಟ್ಟುವುದು ಪ್ರಾಚೀನ ವಾಸ್ತು ಶಿಲ್ಪದ ಪದ್ಧತಿ. ಅದರಂತೆ ಇಲ್ಲಿಯೂ ಮೆಟ್ಟಲುಗಳಿರಬೇಕೆಂದು ನಿಶ್ಚೈಸಿ ಕೊಂಡು ಹುಡುಕಲು ಮೊದಲು ಮಾಡಿದನು. ಜೇಬಲ್ಲಿ ಬೆಂಕಿ ಪೆಟ್ಟಿ ಇದ್ದಿ ತಾದರೂ ಕಾವಲುಗಾರನು ನೋಡಬಹುದೆಂಬ ಭೀತಿಯಿಂದ ಹಚ್ಚಲಿಲ್ಲ.

ಸ್ವಲ್ಪ ಹೊತ್ತು ಹುಡುಕಿದ ಮೇಲೆ ಒಂದು ಸಣ್ಣ ಬಾಗಿಲೂ ಅದಕ್ಕೆ ಹೊಂದಿಕೊಂಡಂತೆ ಮೆಟ್ಟಲುಗಳೂ ಕಂಡವು. ಮೆಲ್ಲನೆ ಒಂದೊಂದಾಗಿ ಹತ್ತಿದನು. ನಿರೀಕ್ಷಿಸಿದ್ದಂತೆ ಮಹಾದ್ವಾರದ ಪಾರ್ಶ್ವದಲ್ಲಿದ್ದ ಕೋಟೆ ಗೋಡೆಯ ಒಳಭಾಗಕ್ಕೆ ಹೋಗಲು ಅದು ಕಟ್ಟಲ್ಪಟ್ಟಿತ್ತು. ಕೈಪಿಡಿಯಿಂದ ಕೂಡಿದ ಆ ಮಾರ್ಗ ಕೋಟೆಯ ಸುತ್ತಲೂ ಇದ್ದಂತೆ ಕಂಡಿತು. ಕಾಮೇಶನು ಸ್ವಲ್ಪ ಮುಂದೆ ಹೋಗಿ ಕೈಪಿಡಿಯ ಗೋಡೆಯಲ್ಲಿ ಅಲ್ಲಲ್ಲಿ ಜೋಡಿಸಲ್ಪಟ್ಟಿದ್ದ ಜಾಲಂದರಗಳ ಮುಖಾಂತರ ಕೆಳಗಿನ ದೃಶ್ಯವನ್ನು ನೋಡಿದನು.

ದುರ್ಗವು ಅಷ್ಟೇನೂ ದೊಡ್ಡದಾಗಿ ಕಾಣಲಿಲ್ಲ. ಸುಮಾರು ೬೦೦ ಅಡಿಗಳ ಚೌಕವಿದ್ದಂತೆ ಕಂಡಿತು. ದುರ್ಗ ಹಳೆಯ ಕಾಲದ್ದಾದರೂ, ಗೋಡೆಗಳು, ಬತೇರಿಗಳು, ದುರ್ಗದಲ್ಲಿದ್ದ ಒಂದೆರಡು ಮನೆಗಳೂ ಒಳ್ಳೆಯ ಸ್ಥಿತಿಯಲ್ಲಿದ್ದಂತೆ ಕಂಡಿತು. ದುರ್ಗದ ಮಧ್ಯದಲ್ಲೊಂದು ಸಿಹಿ ನೀರಿನ ಕೊಳ, ಅದರ ಸುತ್ತ ಹಲವು ಮರಗಿಡಗಳು, ಗೋಡೆಯ ಪಾರ್ಶ್ವದಲ್ಲಿ ನಾಲ್ಕಾರು ಮನೆಗಳ–ಇಷ್ಟು ಮಾತ್ರವೇ ಅಲ್ಲಿದ್ದದ್ದು.

ಅವುಗಳಲ್ಲಿ ದೊಡ್ಡದಾಗಿದ್ದ ಎರಡಂತಸ್ತಿನ ಮನೆಯ ಮುಂದೆ ಕಾರು ನಿಂತಿತ್ತು: ಸಾರಥಿ ಸಮೀಪದಲ್ಲಿ ಸಿಗರೆಟ್ ಸೇದುತ್ತಾ ಕುಳಿತಿದ್ದನು. ಎದುರಿಗೆ ಬಂದು ಮಹಾದ್ವಾರವನ್ನು ತೆರೆದ ಸೇವಕನು ಅಲ್ಲಿರಲಿಲ್ಲ. ಪ್ರಾಯಶಃ ನವಾಬನ ಸಂಗಡ ಮನೆಯೊಳಗೆ ಹೋಗಿರಬಹುದೆಂದು ಕಾಮೇಶ್ ಭಾವಿಸಿದನು. ಮನೆಯ ಎರಡನೆ ಅಂತಸ್ಥಿನ ಒಂದು ಕೊಟಡಿಯಲ್ಲಿ ಮಾತ್ರ ದೀಪವೊಂದು ಉರಿಯುತ್ತಿದ್ದಂತೆ ಕಂಡಿತು. ಉಳಿದೆಲ್ಲ ಕಡೆ ಗಾಢಾಂಧಕಾರ. ಕಲ್ಯಾಣಿಯ ತೀರದಲ್ಲಿದ್ದ ಮರಗಳ ಮೇಲೆ ಹಕ್ಕಿಗಳ ರೆಕ್ಕೆ ಸದ್ದು ಒಂದೊಂದು ಸಾರಿ ಅಸ್ಫುಟವಾಗಿ ಕೇಳಿಸುವುದು. ಮುಂದೇನು ಮಾಡಬೇಕೆಂದು ಕಾಮೇಶನು ನೀರವವಾಗಿ ಯೋಚಿಸುತ್ತಿದ್ದಂತೆ ಅನಿಶೀಥದ ಗಭೀರತೆಯನ್ನು ಭೇದಿಸಿಕೊಂಡು ಭಯಂಕರ ಚೀತ್ಕಾರವೊಂದು ಕೇಳಿಸಿತು.

ದೀಪ ಉರಿಯುತ್ತಿದ್ದ ಎರಡನೆಯ ಅಂತಸ್ತಿನ ಕೊಟಡಿಯಿಂದಲೆ ಚೀತ್ಕಾರ ಕೇಳಿ ಬಂದದ್ದೆಂದು ಕಾಮೇಶ್ ನಿರ್ಧರಿಸಿಕೊಂಡನು. ಸೆಳೆ ಮಿಂಚು ಗಾಢಾಂಧಕಾರವನ್ನು ಭೇದಿಸಿ ಕತ್ತಲಲ್ಲಿ ಅಡಗಿದ್ದ ವಸ್ತುಗಳನ್ನು ಕ್ಷಣಕಾಲ ಬೆಳಕಿಗೆ ತರುವಂತೆ, ಕ್ಷಣಾರ್ಧದಲ್ಲಿ ಅವನ ಹೃದಯ ಮುಂದೇನು ಮಾಡಬೇಕೆಂಬುದನ್ನು ಅರಿತುಕೊಂಡಿತು. ಕೈಪಿಡಿ ಗೋಡೆಯ ಮರೆಯಲ್ಲಿ ನಿಶ್ಶಬ್ಧವಾಗಿ ನಡೆಯುತ್ತಾ ಎರಡಂತಸ್ತಿನ ಮನೆಯ ಹಿಂಭಾಗಕ್ಕೆ ಬಂದನು. ಗೋಡೆಗೆ ಹೊಂದಿದಂತೆ ಮನೆ ಕಟ್ಟಲ್ಪಟ್ಟಿದುದರಿಂದ ಗೋಡೆಯಿಂದ ಮನೆಯ ಮಾಳಿಗೆಗೆ ಇಳಿದನು. ಮಾಳಿಗೆಯ ಮೇಲೆ ಸಣ್ಣ ಬಿಸಿಲು ಮುಚ್ಚು, ಕೆಳಗಿಳಿಯಲು ಮೆಟ್ಟಲುಗಳು. ಕಾವಲುಗಾರನ ಅಜಾಗರೂಕತೆಯಿಂದಲೋ, ಅಥವಾ ನಿರ್ಜನ ಪ್ರದೇಶದಲ್ಲಿ ಯಾರೂ ಬರುವುದಿಲ್ಲವೆಂಬ ಉದಾಸೀನದಿಂದಲೂ ಬಿಸಿಲು

ಮುಚ್ಚಿನ ಬಾಗಿಲು ತೆರೆಯಲ್ಪಟ್ಟಿತ್ತು. ಕಾಮೇಶ್ ಮೆಟ್ಟಲುಗಳನ್ನಿಳಿದು ಮನೆಯ ಒಳ ಹೊಕ್ಕನು.

ದೀಪ ಉರಿಯುತ್ತಿದ್ದ ಮನೆಯ ಹಿಂಭಾಗಕ್ಕೆ ಬಂದಿರಬೇಕಂದು ಅವನ ಕಲ್ಪನೆ. ಆಗ ಹಿಂದಿನ ಚೀತ್ಕಾರ ಶಬ್ಧ ಪುನಃ ಅತ್ಯಂತ ಸಮೀಪದಲ್ಲಿ ಕೇಳಿಸಿತು. ಚೀತ್ಕಾರಕ್ಕೆ ಕಾರಣವಾದ ಹಿಂಸಾಕೃತ್ಯ ಪಾರ್ಶ್ವದ ಕೊಟಡಿಯಲ್ಲೇ ನಡೆಯುತ್ತಿದೆಯೆಂದು ನಿರ್ಧರಿಸಿಕೊಂಡನು. ಸ್ವಲ್ಪಕಾಲ ಸ್ತಬ್ಧನಾಗಿ ನಿಂತು, ಕಿವಿಗೊಟ್ಟು ಕೇಳಿ ಅನಂತರ ಪಾರ್ಶ್ವದ ಕೊಟಡಿಗೆ ಹೋಗುವ ಬಾಗಿಲನ್ನು ಹುಡುಕಿದನು. ಬಾಗಿಲು ಸಿಕ್ಕಿತು. ಪುನಃ ಕಿವಿಗೊಟ್ಟು ಕೇಳಿ ಬಾಗಿಲನ್ನು ಮೆಲ್ಲನೆ ತೆಗೆದು ಇಣಿಕಿ ನೋಡಿದನು. ಅಲ್ಲಿ ಅವನು ಕಂಡ ದೃಶ್ಯ ನುರಿತ ಪತ್ತೇದಾರನ ಕಲ್ಲು ಹೃದಯವನ್ನೂ ಕರಗಿಸುವಷ್ಟು ಘೋರವಾಗಿತ್ತು.

ಕೊಟಡಿಯಲ್ಲಿ ಒಂದು ಸಾಮಾನ್ಯವಾದ ಮಂಚದ ಮೇಲೆ ಸುಮಾರು ೬೦–೬೫ ವರ್ಷದ ವೃದ್ಧನೊಬ್ಬನನ್ನು ಅಂಗತನಾಗಿ ಮಲಗಿಸಿತ್ತು. ಅವನ ದೇಹ ಕಾಲುಗಳು ಭಾರವಾದ ಸರಪಳಿಗಳಿಂದ ಮಂಚಕ್ಕೆ ಕಟ್ಟಲ್ಪಟ್ಟಿದ್ದವು. ಮಹಾದ್ವಾರದಲ್ಲಿ ಎದುರುಗೊಂಡ ಸೇವಕನು ಕಾಲಿನ ಕಡೆ ನಿಂತು ಚಮ್ಮಟಿಗೆಯಂತಹ ಸಾಧನವೊಂದನ್ನು ಕೈಯಲ್ಲಿ ಹಿಡಿದು ಮಂಚಕ್ಕೂ ಸರಪಳಿಗೂ ಮಧ್ಯೆ ಮರದ ಗೂಟಗಳನ್ನು ಹೊಡೆಯುತ್ತಾ ಬಂಧನಗಳನ್ನು ಬಿಗಿಯಾಗಿ ಮಾಡುತ್ತಿದ್ದನು. ಸಮೀಪದಲ್ಲಿ ತಲೆಯ ಹತ್ತಿರ ನವಾಬ್ ಜಾದಾ ಕೈಯಲ್ಲಿ ಹಿಂದೆ ಹೇಳಿದ ಪೆಟ್ಟಿಗೆಯನ್ನು ಹಿಡಿದು ಸಿಂಧಿಯಲ್ಲಿ ಹೇಳುತ್ತಿದ್ದನು.

" ಈ ದುರ್ಗದಲ್ಲಿ ಬಂಧಿಸಲ್ಪಟ್ಟವರು ಯಾರೂ ಇದುವರೆಗೆ ಜೀವ ಸಹಿತ ಹೊರಗೆ ಹೋಗಿಲ್ಲ, ರಾವ್ ಸಾಹೇಬ್. ನಿಮ್ಮಂತ ಅನೇಕ ಮಂದಿ ಕಾಫರರ ರಕ್ತದಿಂದ ನಿರ್ಮಲವಾಗಿದೆ ಈ ಕೊಟಡಿ. ನನ್ನ ಸಹಾಯವಿಲ್ಲದೆ ಇದ್ದಿದ್ದರೆ ಗ್ರಾಮಸ್ಥರು ಇಷ್ಟು ಹೊತ್ತಿಗೆ ನಿಮ್ಮನ್ನು ಕತ್ತರಿಸಿ ಬಿಡುತ್ತಿದ್ದರು. ಬೆಳಕು ಹರಿದ ಮೇಲೆ ಏನಾಗುವುದೋ ಈಗಲೂ ಹೇಳುವುದು ಕಷ್ಟ. ನಿಮ್ಮನ್ನು ಉದ್ಧರಿಸುವುದಕ್ಕಾಗಿಯೇ ಈ ನಿಶೀಥದಲ್ಲಿ ಅರವತ್ತು ಮೈಲಿ ಪ್ರಯಾಣಮಾಡಿ ಇಲ್ಲಿಗೆ ಬಂದೆ. ನಾನು ಹೇಳಿದಂತೆ ನೀವು ಕೇಳುವುದಾದರೆ ನಿಮ್ಮನ್ನು ಈ

ರಾತ್ರಿಯೇ ಕಾರಲ್ಲಿ ರಾಜಕೋಟೆಗೆ ಹಿಂದಿರುಗಿ ಕರೆದುಕೊಂಡು ಹೋಗುತ್ತೇನೆ. ಅಲ್ಲಿಂದ ನೀವು ಬೇಕಾದ ಕಡೆಗೆ ಹೋಗಬಹುದು."

ಮಾತು ಕೇಳಿ ಕಾಮೇಶನಿಗೆ ಆಶ್ಚರ್ಯವಾಯಿತು. ರಾಜಕೋಟೆಯಿಂದ ಅರವತ್ತು ಮೈಲಿ ದೂರದ ಯಾವದೋ ಪ್ರದೇಶಕ್ಕೆ ಬಂದಿರಬಹುದಾಗಿ ತಿಳಿದನು. ಈ ಸ್ಥಳ ಯಾವುದು? ಯಾವ ಸಂಸ್ಥಾನಕ್ಕೆ ಸೇರಿದ್ದು? ಈ ವೃದ್ಧನಾರು? ನವಾಬ್ ಜಾದನ ಬಂಧನಕ್ಕೆ ಇವನು ಸಿಕ್ಕಿದ್ದು ಹೇಗೆ? ಇತ್ಯಾದಿ ಪ್ರಶ್ನೆಗಳು ಕಾಮೇಶನ ತಲೆಯಲ್ಲಿ ಏಕಕಾಲದಲ್ಲಿ ಉದಯಿಸಿದವು.

ಮಂಚದ ಮೇಲೆ ಬಂಧಿಸಲ್ಪಟ್ಟಿದ್ದ ವ್ಯಕ್ತಿ ಕೂಡಲೆ ಉತ್ತರ ಕೊಡಲಿಲ್ಲ. ಕ್ಷಣಕಾಲ ಚಿಂತಿಸಿ ಬಳಿಕ ದೀನ ಸ್ವರದಿಂದ "ನೀವು ನನ್ನಿಂದ ಏನು ಅಪೇಕ್ಷಿಸುವಿರಿ, ನವಾಬ್ ಸಾಹೇಬ್?" ಎಂದನು.

"ಈ ಪೆಟ್ಟಿಗೆಯ ಗುರುತು ನಿಮಗೆ ಚೆನ್ನಾಗಿದೆ ರಾವ್‌ಸಾಹೇಬ್, ನೀವೇ ನಂಬರ್ ಜೋಡಿಸಿ ಇದನ್ನು ಮುಚ್ಚಿದ್ದೀರಿ. ಆ ನಂಬರೇನು ಎಂಬುದನ್ನು ತಿಳಿಸಿದರೆ ನಿಮ್ಮನ್ನು ಬಿಟ್ಟು ಬಿಡುತ್ತೇನೆ."

ಎಂದು ಹೇಳಿ ನವಾಬ ಜಾದಾ ಕಬ್ಬಿಣದ ಕೈ ಪೆಟ್ಟಿಗೆಯನ್ನು ವೃದ್ಧನಿಗೆ ತೋರಿಸಿದನು. ಅದನ್ನು ನೋಡುತ್ತಲೇ ವೃದ್ಧನು ಪುನಃ ಚೀತ್ಕಾರಮಾಡಿದನು. ಆ ಪ್ರಾಚೀನ ದುರ್ಗದ ಶಿಲಾರಾಶಿ ಸೆಲೆಗೊಡುವಂತೆ ಚೀತ್ಕಾರ ಮಾಡಿದನು. ಕ್ಷಣಾರ್ಧದ ಹಿಂದೆ ದೀನಸ್ವರದಿಂದ ಕಾತರನಾಗಿ ನುಡಿದ ಆ ವೃದ್ಧನ ಕಂಠದಲ್ಲಿ ಅಷ್ಟೊಂದು ಶಕ್ತಿಯಿರುವುದಾಗಿ ತಿಳಿದು ಕಾಮೇಶನಿಗೆ ಆಶ್ಚರ್ಯವಾಯಿತು. ಚೀತ್ಕಾರದ ಪ್ರತಿಧ್ವನಿ ನಿಂತಮೇಲೆ ನವಾಬನು ಹೇಳಿದನು.

"ನೀವು ರಾತ್ರಿಯೆಲ್ಲಾ ಅರಚಿಕೊಂಡರೂ ಇಲ್ಲಿ ಯಾರೂ ಬರುವುದಿಲ್ಲ, ರಾವ್ ಸಾಹೇಬ್. ಸಮೀಪದ ಗ್ರಾಮ ಎರಡು ಮೈಲಿ ದೂರದಲ್ಲಿದೆ. ದುರ್ಗದ ಹೆಸರು ಕೇಳಿದರೆ ಹತ್ತಿರ ಯಾರೂ ಸುಳಿಯುವುದಿಲ್ಲ- ಕಾಫರರಂತೆ ಮುಸಲ್ಮಾನರೂ ಭೂತ ಚೇಷ್ಟೆಯೆಂದು ಭಾವಿಸಿ ಅಲ್ಲಾ ಹೆಸರು ಹೇಳುತ್ತಾ ದೂರ ಸರಿಯುತ್ತಾರೆ."

"ಕೈ ಪೆಟ್ಟಿಗೆಯನ್ನು ನಂಬಿಕಸ್ಥನಾದ ಭೃತ್ಯನೊಬ್ಬನ ಕೈಯಲ್ಲಿ ಕಳು ಹಿಸಿದ್ದೆ. ಅದು ನಿಮಗೆ ಹೇಗೆ ದೊರೆಯಿತು?"

ವೃದ್ಧನು ಪ್ರಶ್ನಿಸಿದನು.

"ಈ ನವಾಬನನ್ನು ವಂಚಿಸುವುದು ಯಾರಿಗೂ ಸಾಧ್ಯವಲ್ಲ, ರಾವ್ ಸಾಹೇಬ್. ನಿಮ್ಮ ಭೃತ್ಯನು ರಾಜಕೋಟೆ ಬಿಡುತ್ತಿದ್ದಾಗ ಗುಪ್ತ ಪೋಲೀಸರು ಅವನ ಮೇಲೆ ಬಿದ್ದರು. ನಿಮ್ಮ ಅದೃಷ್ಟಕ್ಕೆ ಬೊಂಬಾಯಲ್ಲಿ ನನಗೆ ಪರಿಚಿತ ನಾದವನೊಬ್ಬನು ಅವನನ್ನು ಪೋಲೀಸರಿಂದ ರಕ್ಷಿಸಿ ತಾನಿದ್ದ ಸ್ಥಳಕ್ಕೆ ಕರೆದು ಕೊಂಡು ಹೋದನು. ಭೃತ್ಯನನ್ನೇ ಹಿಂಬಾಲಿಸುತ್ತಿದ್ದ ನನ್ನ ಕಡೆಯವ ನೊಬ್ಬನು ನನಗೆ ಮೊದಲೆ ಆ ಸ್ಥಳಕ್ಕೆ ಹೋಗಿ ಚೂರಿಯಿರಿದು ನಿಮ್ಮ ಭೃತ್ಯ ನನ್ನು ಕೊಂದು ಹಾಕಿದ್ದನು. ನಾನು ಅಲ್ಲಿಗೆ ಹೋದಾಗ ಈ ಕೈ ಪೆಟ್ಟಿಗೆ ಆ ನನ್ನ ಪರಿಚಿತನ ವಶದಲ್ಲಿತ್ತು. ನನ್ನ ಪೆಟ್ಟಿಗೆಯೆಂದು ಹೇಳಿ ತಂದಿದ್ದೇನೆ."

ನಡೆದುದನ್ನು ಇಷ್ಟೊಂದು ಸಹಜವಾಗಿ ಸರಳವಾಗಿ ನವಾಬ್‌ಜಾದಾ ಹೇಳಿದ್ದನ್ನು ಕೇಳಿ ಕಾಮೇಶ್ ಸ್ತಂಭಿತನಾದನು. ಜುನಾಗಡದ ಯುವರಾಜನೇ ಆಗಲಿ ಈ ವ್ಯಕ್ತಿ ಪರಿಣತನಾದ ಚೋರ ಶಿಖಾಮಣಿಯೆಂದು ಅವನು ತಿಳಿದನು.

"ಇಷ್ಟೊಂದು ಸಾಮರ್ಥ್ಯಶಾಲಿಗಳಾದ ನಿಮಗೆ ಈ ಸಾಮಾನ್ಯ ಕೈ ಪೆಟ್ಟಿಗೆ ತೆರೆಯುವುದು ಸಾಧ್ಯವಿಲ್ಲವೇ, ನವಾಬ್ ಸಾಹೇಬ್?"

ಬಂಧಿತನಾದ ವೃದ್ಧನು ಕುಹಕದ ಧ್ವನಿಯಿಂದ ನುಡಿದನು.

"ಇದೇನು ಸಾಮಾನ್ಯ ಪೆಟ್ಟಿಗೆಯೇ ರಾವ್ ಸಾಹೇಬ್. ಎಷ್ಟೊಂದು ಕುಶಲತೆಯಿಂದ, ನೈಪುಣ್ಯದಿಂದ ಈ ಕೈಪೆಟ್ಟಿಗೆ ತಯಾರಿಸಲ್ಪಟ್ಟಿದೆ! ಇದನ್ನು ನೋಡಿದ ಮೇಲೆ ನಿಮ್ಮಲ್ಲಿ ನನ್ನ ಗೌರವ ಇಮ್ಮಡಿಯಾಯಿತು. ನಮ್ಮ ಲೋಹ ಶಿಲ್ಪಿಗಳ ಅಸಾಧಾರಣ ನಿಪುಣತೆಯನ್ನು ಪ್ರಕಟಿಸುವ ಅಪೂರ್ವ ಕಲಾವಸ್ತು ಈ ಪೆಟ್ಟಿಗೆ. ಬಲಪ್ರಯೋಗದಿಂದ ಇದನ್ನು ತೆಗೆಯುವುದು ನೀವು ಭಾವಿಸಿರು ವಷ್ಟು ಕಷ್ಟವೇನೂ ಅಲ್ಲ ನನಗೆ. ಆದರೆ ಅದರಲ್ಲಿರುವ ಅಮೂಲ್ಯ ವಸ್ತುವಿಗೆ

ಅಪಾಯವಾಗಬಹುದೆಂಬ ಭಯದಿಂದ ನಾನು ಸುಮ್ಮನಾದೆ. ನಾನು ನಿಮ್ಮಿಂದ ಅಪೇಕ್ಷಿಸುವುದು ಈ ಬೀಗ ತೆರೆಯುವ ರಹಸ್ಯ ಸಂಖ್ಯೆಯನ್ನು"

"ಪ್ರಾಣ ಹೋದರೂ ಅದನ್ನು ನಿಮಗೆ ತಿಳಿಸುವುದಿಲ್ಲ."

ವೃದ್ಧನು ಹಠಾತ್ತಾಗಿ ಕಂಠ ಧ್ವನಿಯನ್ನು ಬದಲಿಸಿ ಉತ್ತರಕೊಟ್ಟನು.

"ಹಾಗಾದರೆ ಬೇರೆ ಮಾರ್ಗವಿಲ್ಲ. ಗೂಟಗಳನ್ನು ಕೈಯಲ್ಲಿ ಹಿಡಿದು ಸೇವಕ ಸಿದ್ಧನಾಗಿ ನಿಂತಿದ್ದಾನೆ. ಈ ವಯಸ್ಸಿನಲ್ಲಿ ನಿಮ್ಮನ್ನೇಕೆ ಈ ಚಿತ್ರ ಹಿಂಸೆಗೆ ಗುರುಪಡಿಸಬೇಕು ಎಂದು ನಾನು ಸುಮ್ಮನಿದ್ದೇನೆ. ಏನು ಹೇಳುವಿರಿ?"

ವೃದ್ಧನು ಉತ್ತರಕೊಡಲಿಲ್ಲ. ಕಣ್ಣುಗಳನ್ನು ಮುಚ್ಚಿಕೊಂಡು ಸುಮ್ಮನೆ ಮಲಗಿದನು. ತುಟಿಗಳು ಮಾತ್ರ ಆಡುತ್ತಿದ್ದವು. ನವಾಬನು ಸೇವಕನಿಗೆ ಸನ್ನೆಮಾಡಿದನು. ಸೇವಕನು ಗೂಟವೊಂದನ್ನು ತೆಗೆದು ಸರಪಣಿಗೂ ಮಂಚಕ್ಕೂ ಮಧ್ಯೆಯಿಟ್ಟು ಚಮ್ಮಟಿಗೆಯಿಂದ ಹೊಡೆಯಲು ಪ್ರಾರಂಭಿಸಿದನು. ಒಂದು ಕಡೆಯಾದ ಮೇಲೆ ಇನ್ನೊಂದು ಕಡೆಯೂ ಅದೇ ರೀತಿ ಮಾಡಿದನು. ವೃದ್ಧನು ಕೂಗಲಿಲ್ಲ. ಅಲುಗಾಡಲಿಲ್ಲ. ಎರಡನೆಯ ಗೂಟವನ್ನು ಹೊಡೆಯುತ್ತಿದ್ದಾಗ ವೃದ್ಧನು ಕಣ್ಣು ತೆರೆದು ನವಾಬನ ಕಡೆ ನೋಡಿದನು. ನವಾಬನು ಸೇವಕನಿಗೆ ನಿಲ್ಲಿಸುವಂತೆ ಸನ್ನೆಮಾಡಿ "ಮನಸ್ಸು ಬದಲಾಯಿಸಿತೇ ರಾವ್ ಸಾಹೇಬ್? ನೀವು ಸಮ್ಮತಿ ಸೂಚಿಸಿದರೆ ಸಾಕು. ಬಂಧನ ಬಿಡಿಸುತ್ತೇನೆ" ಎಂದನು.

ವೃದ್ಧನು ಆಗಲೂ ಉತ್ತರ ಕೊಡಲಿಲ್ಲ. ಅಸಮ್ಮತಿಯನ್ನು ಸೂಚಿಸಿ ತಲೆಯಾಡಿಸಿದನು. ಚಿತ್ರಹಿಂಸೆ ಪುನಃ ಆರಂಭವಾಯಿತು. ಒಂದು ಕಡೆ ಮುಗಿದು ಎರಡನೆಯ ಕಡೆ ಗೂಟ ಹೊಡೆಯುತ್ತಿದ್ದಾಗ ನೋವು ತಡೆಯಲಾರದೆ ವೃದ್ಧನು ಪುನಃ ಚೀತ್ಕಾರ ಮಾಡಿದನು. ಆಗ ನವಾಬನು ಕಟ್ಟುಗಳನ್ನು ಸಡಿಲಿಸುವಂತೆ ಸೇವಕನಿಗೆ ಸನ್ನೆಮಾಡಿ ಕೈ ಪೆಟ್ಟಿಗೆಯನ್ನು ಮಂಚದ ಮೇಲೆ ವೃದ್ಧನ ಪಾರ್ಶ್ವದಲ್ಲಿಟ್ಟನು. ವೃದ್ಧನು ಪಾರ್ಶ್ವಕ್ಕೆ ತಿರುಗಿ ಅವಸರದಿಂದ ಸಂಖ್ಯೆಯಿದ್ದ ಬೀಗದ ಉಂಗುರಗಳನ್ನು ತಿರುಗಿಸುತ್ತಿದ್ದನು. ಕಾಲ ಬಳಿ

ನಿಂತಿದ್ದ ಸೇವಕನು ಹಿಂದೆ ನಿಂತು ಚಮ್ಮಟಿಗೆಯನ್ನು ಕೈಯಿಂದ ಆಡಿಸ ತೊಡಗಿದನು.

ಕ್ಷಣಾರ್ಧದಲ್ಲಿ ನವಾಬನ ಸಂಚು ಕಾಮೇಶನಿಗೆ ಹೊಳೆಯಿತು—ಪೆಟ್ಟಿಗೆ ತೆಗೆವಕೂಡಲೆ ಚಿಮ್ಮಟಿಗೆಯೇಟಿನಿಂದ ವೃದ್ಧನನ್ನು ಕೊಲ್ಲುವುದು. ಈ ವಿಚಾರ ವಾಗಿ ಮೊದಲೇ ಸೇವಕನಿಗೆ ಆಜ್ಞೆ ಮಾಡಿರಬೇಕೆಂದೂ, ಅದಕ್ಕಾಗಿ ಅವನು ಸಿದ್ಧನಾಗಿ ನಿಂತಿರುವನೆಂದೂ ಕಾಮೇಶ್ ತಿಳಿದನು. ಇನ್ನು ತಡೆಯುವುದು ಅವನಿಗೆ ಸಾಧ್ಯವಾಗಲಿಲ್ಲ. ಕೈ ಪೆಟ್ಟಿಗೆಯ ಬಾಗಿಲು ಖಳಕ್ಕನೆ ತೆಗೆಯು ತ್ತಿದ್ದಂತೆ ಅವನು ದಢಾರನೆ ಬಾಗಿಲು ತೆಗೆದು ಕೈಯಲ್ಲಿದ್ದ ಪಿಸ್ತೂಲನ್ನು ಸೇವಕನ ಎದೆಗೆ ಗುರಿಯಿಟ್ಟು ಹೊಡೆದನು. ಉದ್ದಿನ ಮೂಟೆಯಂತೆ ಸೇವಕನು ದೊಪ್ಪನೆ ಕೆಳಗುರುಳಿದನು. ಕಾಮೇಶನು ಕೂಡಲೆ ಪಿಸ್ತೂಲನ್ನು ನವಾಬನ ಕಡೆ ತಿರುಗಿಸಿ "ಕೈ ಮೇಲಕ್ಕೆತ್ತಿ, ನವಾಬ್ ಸಾಹೇಬ್, ಈ ರಾತ್ರಿ ನಾವು ಒಬ್ಬರನೊಬ್ಬರು ಅಗಲುವಂತಿಲ್ಲ. ಕದಲೀರಿ ಜೋಕೆ" ಎಂದನು.

ಪೆಟ್ಟಿಗೆ ತೆರೆದುಕೊಂಡ ಕೂಡಲೆ ನವಾಬನ ಕಣ್ಣುಗಳು ಅದರಲ್ಲಿದ್ದ ಅಪೂರ್ವ ವಸ್ತುವಿನ ಕಡೆಗೆ ಆಕರ್ಷಿತವಾಗಿ ಎವೆಯಿಕ್ಕದೆ ಅದನ್ನೇ ನೋಡುತ್ತಿದ್ದವು. ಪಾರವಶ್ಯದಿಂದ ಅವನ ಬೇರೆ ಇಂದ್ರಿಯಗಳು ಕ್ಷಣಕಾಲ ಸ್ತಂಭಿತ ವಾದವು. ಪಿಸ್ತೂಲು ಶಬ್ದವಾದಾಗ ಬೆಚ್ಚಿ ಎಚ್ಚರಗೊಂಡನು. ಕಾಮೇಶನ ಆಜ್ಞೆಯನ್ನು ಕೇಳಿ ದಿಕ್ಕು ತೋರದೆ ಕೈಗಳನ್ನು ಮೇಲೆತ್ತಿದನು. ಆಗ ಕಾಮೇಶನ ದೃಷ್ಟಿ ಪೆಟ್ಟಿಗೆಯಲ್ಲಿದ್ದ ಅಪೂರ್ವ ವಸ್ತುವಿನ ಕಡೆಗೆ ತಿರುಗಿತು.

ಮಸಕಾದ ಆ ದೀಪದ ಬೆಳಕಿನಲ್ಲಿಯೂ ಪೆಟ್ಟಿಗೆಯಲ್ಲಿದ್ದ ವಸ್ತು ನೂರು ನಕ್ಷತ್ರಗಳನ್ನು ಒಂದೇ ಸ್ಥಳದಲ್ಲಿಟ್ಟಂತೆ ಪ್ರಕಾಶಿಸುತ್ತಿತ್ತು. ಯಾವುದರ ನಿಮಿತ್ತ ತಾನು ರಾಜಕೋಟೆಗೆ ಬಂದಿದ್ದನೋ ಆ ರತ್ನಹಾರವೇ ಇದಾಗಿರಬೇಕೆಂದು ತಿಳಿಯಲು ಕಾಮೇಶನಿಗೆ ಹೆಚ್ಚು ಹೊತ್ತು ಹಿಡಿಯಲಿಲ್ಲ. ಕೃತಕ ಹಾರ ವಾಗಿದ್ದರೆ ಅದಕ್ಕಾಗಿ ಎರಡು ಕೊಲೆ ಚಿತ್ರ ಹಿಂಸೆಗಳು ನಡೆಯುವ ಸಂಭವ ವಿರಲಿಲ್ಲ. ಮಂಚದ ಮೇಲೆ ಬಂಧಿಸಲ್ಪಟ್ಟಿದ್ದ ವೃದ್ಧನೇ ಕಿಷನ್‌ಚಂದನೆಂದು ಅವನಿಗೆ ಖಂಡಿತವಾಯಿತು. ದೈವ ತನ್ನ ಕಡೆಗಿದೆಯೆಂದೂ ಆದ್ದರಿಂದಲೇ

ತಾನು ಯಾರನ್ನು ಹುಡುಕಿಕೊಂಡು ಬಂದಿದ್ದನೋ ಆ ವ್ಯಕ್ತಿ ಕಾಲಿಗೆ ತೊಡರಿದ ನೆಂದೂ ಭಾವಿಸಿದನು. ಮುಂದೇನು ಮಾಡಬೇಕೆಂಬುದನ್ನು ನಿರ್ಧರಿಸಿಕೊಂಡು ಆಯುಧಗಳಿಗಾಗಿ ನವಾಬನ ಇಜಾರ ಮತ್ತು ಕೋಟಿನ ಜೇಬುಗಳನ್ನು ಹುಡುಕಿ ದನು. ಅವಿಚಿಟ್ಟಿದ್ದ ಪಿಸ್ತೂಲು ದೊರಕಿತು. ಅದನ್ನು ಕಿತ್ತುಕೊಂಡು ಕ್ಷಣಾರ್ಧದಲ್ಲಿ ಕೈಗೆ ಕೋಳಗಳನ್ನು ತೊಡಿಸಿ ಮಂಚದ ಮೇಲಿದ್ದ ಅಂಗ ವಸ್ತ್ರದಿಂದ ಬಾಯನ್ನು ಮುಚ್ಚಿ ಭದ್ರವಾಗಿ ಕಟ್ಟಿದನು. ಇನ್ನು ನವಾಬನು ತಪ್ಪಿಸಿಕೊಳ್ಳುವುದಿರಲಿ, ಕೂಗುವುದೂ ಸಾಧ್ಯವಿರಲಿಲ್ಲ.

ಮಂಚದ ಮೇಲೆ ಮಲಗಿದ್ದ ವೃದ್ಧನು ಆಶ್ಚರ್ಯಾನ್ವಿತನಾಗಿ ಇದೆಲ್ಲ ವನ್ನೂ ನೋಡುತ್ತಾ ಮಂತ್ರಮುಗ್ಧನಂತೆ ಮಲಗಿದ್ದನು. ನವಾಬನ ಕೈಕಾಲು ಗಳನ್ನು ಕಟ್ಟಿ ಕೆಳಗುರುಳಿಸಿದಾಗ ಅವನಿಗೆ ವಾಕ್‌ಸ್ಫೂರ್ತಿಯುಂಟಾಯಿತು.

" ನೀನು ಯಾರು ಮಹಾತ್ಮ? ಸಮಯಕ್ಕೆ ಬಂದು ನನ್ನನ್ನುಳಿಸಿದೆ." ಎಂದನು.

" ನಾನೇಕೆ ಮಹಾತ್ಮನಾಗಲಿ. ನಿಮ್ಮಂತೆ ಒಬ್ಬ ಸಾಮಾನ್ಯ ಪುರುಷ ಕಿಷನ್‌ಚಂದರೇ " ಎಂದನು ಕಾಮೇಶ್.

" ಹಾಗಾದರೆ ನನ್ನ ಸಹಾಯ ಪ್ರಾರ್ಥನೆ ವಿಫಲವಾಗಲಿಲ್ಲ."

ಮುಂದೇನೂ ಮಾತಾಡದಂತೆ ವೃದ್ಧನಿಗೆ ಸನ್ನೆಮಾಡಿ ಕಾಮೇಶ್ ಕಟ್ಟಿದ್ದ ಬಂಧನಗಳನ್ನು ಒಂದೊಂದಾಗಿ ಬಿಡಿಸಿದನು. ತೆರೆದಿಟ್ಟಿದ್ದ ಕೈ ಪೆಟ್ಟಿಗೆಯನ್ನು ಭದ್ರವಾಗಿ ಮುಚ್ಚಿದನು.

ವೃದ್ಧನ ಕಾಲುಗಳಿಗೆ ಸರಪಣಿಯಿಂದ ಒಂದೆರಡು ಕಡೆ ಮೂಕ ಗಾಯ ಗಳಾಗಿದ್ದವು. ಮೂಳೆಗಳು ಮುರಿದಿರಲಿಲ್ಲ. ಮೆಲ್ಲನೆ ಎದ್ದು ನಿಂತನು. ಕಾಮೇಶ್ ಪೆಟ್ಟಿಗೆಯನ್ನು ವೃದ್ಧನ ಕೈಗೆ ಕೊಟ್ಟು ನವಾಬನ ಕಡೆ ತಿರುಗಿ ಹೇಳಿದನು :

" ನೀವು ಈ ಅಸಹಾಯಕ ಮುದುಕನ ವಿಚಾರದಲ್ಲಿ ಎಷ್ಟೊಂದು ನಿಷ್ಠು ರತೆಯಿಂದ ನಡೆದುಕೊಳ್ಳಲು ನಿರ್ಧರಿಸಿಕೊಂಡಿದ್ದಿರೆಂಬುದನ್ನು ನಾನು

ಸಕಾಲದಲ್ಲಿ ತಿಳಿದುಕೊಂಡೆ, ನವಾಬ್‌ಜಾದಾ. ಆದರಿಂದಲೇ ನಿಮ್ಮ ಸೇವಕನನ್ನು ಗುಂಡಿಟ್ಟು ಕೊಲ್ಲಬೇಕಾಯಿತು. ಹಾಗೆಯೇ ನಿಮ್ಮನ್ನು ಮುಗಿಸಿದ್ದರೆ ಜಗತ್ತಿನ ಪಾಪದ ಭಾರವನ್ನು ಸ್ವಲ್ಪವಾದರೂ ಕಡಿಮೆ ಮಾಡಿದಂತಾಗುತ್ತಿತ್ತು. ಆದರೆ ವಿನಾಕಾರಣ ಒಬ್ಬ ಮನುಷ್ಯನನ್ನು ಕೊಲ್ಲುವುದು ಮಾನವ ಧರ್ಮವಲ್ಲ. ನೀನು ವಿಧರ್ಮಿ, ದ್ರೋಹಿ. ಆದರೂ ನಿನ್ನ ರಕ್ತದಿಂದ ನನ್ನ ಕೈಗಳನ್ನು ಕೊಳಕು ಮಾಡಿಕೊಳ್ಳುವುದು ನನಗಿಷ್ಟವಿಲ್ಲ. ನೀವು ಯಾರನ್ನು "ಅಲ್ಲಾ" ಎಂದು ಕರೆಯುವಿರೋ ಅವನೇ ಎಲ್ಲ ಧರ್ಮಗಳ ದೇವರು. ಆ ಅಲ್ಲಾ ನಿಮ್ಮ ಪಾಪ ಪುಣ್ಯ ವಿಚಾರಣೆ ನಡೆಸುವನು. ನಾನಿನ್ನು ಹೋಗುತ್ತೇನೆ."

ನವಾಬನು ತೀವ್ರ ದೃಷ್ಟಿಯಿಂದ ನೋಡುತ್ತಿದ್ದನು. ಕಾಮೇಶ್ ಅವನನ್ನು ಎತ್ತಿ ಮಂಚದ ಮೇಲೆ ಮಲಗಿಸಿ. "ನಿಮ್ಮ ಆಜ್ಞೆಯಂತೆ ಅನೇಕರನ್ನು ಬಂಧಿಸಿದ್ದ ಈ ಸರಪಳಿಯ ಅನುಭವ ನಿಮಗೂ ಆಗಲಿ" ಎಂದು ಹೇಳಿ ಸರಪಳಿಯಿಂದ ನವಾಬನ ಕೈಕಾಲು ದೇಹಗಳನ್ನು ಭದ್ರವಾಗಿ ಕಟ್ಟಿದನು.

ಮೇಲೆ ಇಷ್ಟೆಲ್ಲ ನಡೆಯುತ್ತಿದ್ದರೂ ಸಾರಥಿ ನಿಶ್ಚಿಂತನಾಗಿ ಧೂಮಪಾನ ಮಾಡುತ್ತ ಕುಳಿತಿರಲು ಕೆಲವು ಮುಖ್ಯ ಕಾರಣಗಳಿದ್ದವು. ಭೂತಗಳ ವಾಸ ಸ್ಥಾನವೆಂಬ ನಂಬಿಕೆಯಿಂದ ಸುತ್ತು ಮುತ್ತಿನ ಜನ ಹಗಲು ಹೊತ್ತು ಕೂಡಾ ದುರ್ಗಕ್ಕೆ ಬರುತ್ತಿರಲಿಲ್ಲ. ಆ ಪ್ರದೇಶದ ಪುಂಡರು, ಕಳ್ಳಕಾಕರು ದುರ್ಗವು ನವಾಬ್‌ಜಾದನ ರಹಸ್ಯ ಕಾರಾಸ್ಥಾನವೆಂದು ತಿಳಿದು ದೂರವಾಗಿರುತ್ತಿದ್ದರು. ಚೀತ್ಕಾರ, ಗುಂಡು ಹಾರಿಸುವುದು, ಹೊಡೆದಾಟ ಇತ್ಯಾದಿ ಘಟನೆಗಳು ಆ ರಹಸ್ಯ ಗೃಹಕ್ಕೆ ಸಹಜವೆಂಬುದನ್ನು ಸಾರಥಿ ಅನುಭವದಿಂದ ತಿಳಿದಿದ್ದನು. ಮೇಲಾಗಿ ತನಗೆ ಸಂಬಂಧವಿಲ್ಲದ ವಿಷಯದಲ್ಲಿ ಪ್ರವೇಶಿಸಿ ನವಾಬನ ಕೋಪಕ್ಕೆ ಪಾತ್ರನಾಗುವುದು ಸಾರಥಿಗೆ ಸರ್ವಥಾ ಇಷ್ಟವಿರಲಿಲ್ಲ. ನವಾಬನು ತಮ್ಮ ಕಾರ್ಯ ಭಾಗಗಳನ್ನು ಮುಗಿಸಿ ಕೆಳಗಿಳಿದು ಬರುವವರೆಗೆ ಧೂಮಪಾನದ ಆನಂದಾನುಭವದಲ್ಲಿ ಮೈಮರೆಯುವುದು ಅವನ ಪದ್ಧತಿಯಾಗಿತ್ತು. ಹಿಂದಿನಿಂದ ಯಾರೋ ಬಂದು ತಲೆಯ ಮೇಲೆ ಬಲವಾಗಿ ಗುದ್ದಿದಾಗ ಅವನು 'ಹಾ' ಎಂದು ಅರಚಿ ಪ್ರತಿಕ್ಷಣದಲ್ಲಿ ಪ್ರಜ್ಞಾಹೀನನಾಗಿ ನೆಲಕ್ಕುರುಳಿದನು. ಕಾಮೇಶ್ ಅವನ ಕೈಕಾಲುಗಳನ್ನು ಕಟ್ಟಿ ಜೇಬು ಹುಡುಕಿ ಸ್ವಿಚ್ ಕಿ ಮತ್ತು ಡ್ರೈವಿಂಗ್

ಲೈಸೆನ್ಸನ್ನು ತೆಗೆದುಕೊಂಡು ಕಾರಿನ ಹತ್ತಿರ ಹೋಗಿ ಬಾಗಿಲು ತೆರೆದು ವೃದ್ಧನನ್ನು ಒಳಗೆ ಕುಳ್ಳಿರಿಸಿದನು. ಬಳಿಕ ತಾನು ಸಾರಥಿಯ ಸ್ಥಾನದಲ್ಲಿ ಕುಳಿತು ಕಾರನ್ನು ತಿರುಗಿಸಿ ದುರ್ಗದಿಂದ ಹೊರಗೆ ಬಂದನು. ಛಾಟಾ ಮಾರ್ಗವನ್ನು ತಲಪಿದಾಗ ರಾಜಕೋಟೆಗೆ ಹೋಗಲು ಎಡಕ್ಕೆ ತಿರುಗಬೇಕೇ ಬಲಕ್ಕೆ ತಿರುಗಬೇಕೇ ಎಂಬುದು ತಿಳಿಯಲಿಲ್ಲ.

ಆಗ ಕಾಮೇಶ್ ವೃದ್ಧನ ಕಡೆ ತಿರುಗಿ " ರಾಜಕೋಟೆಗೆ ದಾರಿಯಾವುದು ಕಿಷನ್‌ಚಂದರೇ ? ನಿಮಗೆ ಈ ಪ್ರದೇಶದ ಪರಿಚಯವಿರಬೇಕು ಎಂದು ಕಾಣುತ್ತದೆ " ಎಂದನು.

ಕಿಷನ್‌ಚಂದನು ಸ್ವಲ್ಪ ಹೊತ್ತು ಯೋಚಿಸಿ " ಬಲಕ್ಕೆ ತಿರುಗಿದರೆ ಸುಮಾರು ೪೦ ಮೈಲು ದೂರ " ಎಂದು ಉತ್ತರ ಕೊಟ್ಟನು.

ಕಾರು ಅದರಂತೆ ತಿರುಗಿ, ಕೆಸರಿಂದ ಪಾರಾದ ಮದಗಜದಂತೆ ನಾಲ್ವಡಿ ವೇಗದಿಂದ ರಾಜ ಕೋಟೆಯ ಕಡೆಗೆ ಹೊರಟಿತು.



# ಹತ್ತನೆಯ ಪರಿಚ್ಛೇದ

ಈಗ ನಾವು ರಾಜಕೋಟೆಯ ಹೋಟಲಿಗೆ ಹಿಂದಿರುಗಿ ಅಲ್ಲಿ ರಮಾನಂದ್ ಪ್ರಮೀಳಾ ಇವರ ಗತಿಯೇನಾಯಿತೆಂಬುದನ್ನು ತಿಳಿಯುವುದು ಅಗತ್ಯ.

ಕಾಮೇಶ್ ಕೊಟಡಿಯಿಂದ ಅದೃಶ್ಯನಾದ ಕೂಡಲೆ ಅವನನ್ನು ಹಿಂಬಾಲಿಸಿ ಸಂಗಡ ಹೋಗುವುದು ರಮಾನಂದನ ಉದ್ದೇಶವಾಗಿತ್ತು. ಆದರೆ ಕೊಟಡಿಯಲ್ಲಿ ನಾಗರಿಕನ ಶವ ಮತ್ತು ಬಂದಿಯೊಡನೆ ಪ್ರಮೀಳೆಯೊಬ್ಬಳನ್ನೇ ಬಿಟ್ಟು

ಹೋಗುವುದು ವೀರೋಚಿತವಲ್ಲವೆಂದು ತೋರಿತು. ಅಲ್ಲದೆ ಇಲ್ಲಿಯೇ ತನಗಾಗಿ ಕಾದಿರುವಂತೆ ಕಾಮೇಶ್ ಹೇಳಿದ್ದಾನೆ. ಈ ಎಲ್ಲ ಕಾರಣಗಳಿಂದ ತನ್ನಲ್ಲಿ ಆಗ ತಾನೆ ಅಂಕುರಿಸಿದ್ದ ಸಾಹಸ ಪ್ರವೃತ್ತಿಯನ್ನು ಅದುಮಿ ಹಿಡಿದಿಡುವುದು ಸೂಕ್ತ ವೆಂದು ರಮಾನಂದ್ ಭಾವಿಸಿದನು. ಕೂಡಲೆ ಅವನು ಕಿಟಕಿ ಬಾಗಿಲುಗಳನ್ನು ಮುಚ್ಚಿ ದೀಪ ಹಾಕುವಂತೆ ಪ್ರಮಿಳೆಗೆ ಹೇಳಿದನು.

ಕೊಟಡಿ ಬೆಳಕಾದಾಗ ದೀಪ ಆರಿಸಿ ಪಿಸ್ತೂಲು ಹಾರಿಸಿದ ಅಪರಿಚಿತ ಯೋಧನು ಭೂತಲಶಾಯಿಯಾಗಿ ಪ್ರಜ್ಞಾಶೂನ್ಯನಂತೆ ಬಿದ್ದಿರುವುದು ಕಂಡಿತು. ಅವನು ಕೂಡಲೆ ಎಚ್ಚರಗೊಳ್ಳದಂತೆ ಪಾರ್ಶ್ವದಲ್ಲಿದ್ದ ಸುಖಾಸನವನ್ನು ಎದೆಯ ಮೇಲಿಟ್ಟು ರಮಾನಂದ್ ಎದ್ದು ನಿಂತು ಸಿಗರೇಟು ಹಚ್ಚುತ್ತಾ ತೀವ್ರ ಕಂಠದಿಂದ **ಹೇ**ಳಿದನು :

" ನೀನೊಂದು ಸಾರಿ ಕಿರಿಚಿಕೊಳ್ಳಬಾರದೆ, ಪ್ರಮೀಳಾ? ಇಂತಹ ಘಟನೆಗಳು ನಡೆದಾಗ ಗಟ್ಟಿಯಾಗಿ ಕಿರಚಿಕೊಳ್ಳುವುದು ಹೆಂಗಸರ ಸಂಪ್ರದಾಯ."

ಪ್ರಮೀಳಾ ಮೃದುವಾಗಿ ನಕ್ಕು ನುಡಿದಳು : " ನಾನು ಆ ಸಂಪ್ರದಾಯ ರಕ್ಷಿಸಿಕೊಳ್ಳದೆ ಹೋದರೆ ನಷ್ಟವೇನೂ ಇಲ್ಲ. ಅದಕ್ಕಿಂತ ಈ ಯೋಧನ ವ್ಯವಸ್ಥೆ ಮುಖ್ಯವೆಂದು ಕಾಣುತ್ತದೆ."

" ಏನು ಮಾಡುವುದು ಇವನನ್ನು? ಚೂರಿಯಿಂದಿರಿಯಲೆ? ಗುಂಡು ಹಾರಿಸಿ ಕೊಲ್ಲಲೆ? ಕಾಮೇಶ್ ಇದ್ದಿದ್ದರೆ ಎರಡರಲ್ಲಿ ಯಾವುದು ಉಚಿತವೆಂಬು ದನ್ನು ಗೊತ್ತು ಮಾಡುತ್ತಿದ್ದ."

" ಅವರು ಬಂದು ನಿರ್ಧರಿಸುವವರೆಗೆ ಬಂದಿಯ ಕೈಕಾಲು ಕಟ್ಟಿ ಮೂಲೆ ಯಲ್ಲಿ ಹಾಕಿದ್ದರೆ ಒಳ್ಳೆಯದು ಎಂತ ಕಾಣುತ್ತದೆ ನನಗೆ."

" ಕಟ್ಟ ಹಾಕಲು ಹಗ್ಗವೆಲ್ಲಿದೆ? ಪತ್ತೇದಾರಿ ಕಥೆಗಳಲ್ಲಿ ಬರೆಯುವಂತೆ ಟವಲ್ ಅಥವಾ ಮಗ್ಗಲು ಹಾಸಿಗೆ ಹರಿದು ಕಟ್ಟೋಣವೇ?"

"ಅಗತ್ಯವಿಲ್ಲ. ಚೌದುರಿಯ ಟ್ರಂಕಲ್ಲಿ ಹಗ್ಗಗಳಿವೆ"—ಎಂದು ಹೇಳಿ ಪ್ರಮೀಳಾ ಟ್ರಂಕ್ ತೆಗೆದು ಸೆಣಬು ಹಗ್ಗದ ಸುರುಳಿಯೊಂದನ್ನು ಹೊರಗೆ ತೆಗೆದು ರಮಾನಂದನಿಗೆ ಕೊಟ್ಟಳು.

"ಹಗ್ಗ ಹೇಗೆ ಕಟ್ಟಬೇಕೋ ಬಂದರಲ್ಲವೆ ನನಗೆ! ಪತ್ತೆದಾರಿ ಕೆಲಸ ಮಾಡಲಿಲ್ಲ. ಚಿಕ್ಕವನಾಗಿದ್ದಾಗ ಸ್ಕೌಟ್ ಕ್ಯಾಂಪಿನಲ್ಲಿ ಕಲಿತದ್ದು ಮರೆತು ಹೋಗಿದೆ" ಎನ್ನುತ್ತಾ ರಮಾನಂದ್ ಹಗ್ಗವನ್ನು ಬಿಚ್ಚಿ ಯೋಧನ ಕೈಕಾಲು ಗಳನ್ನು ಬಿಗಿದು ಕಟ್ಟಿದನು. ಸುಖಾಸನದ ಭಾರದಿಂದ ಯೋಧನು ಚಲಿಸದೆ ಬಿದ್ದಿದ್ದನು. ಪ್ರಮೀಳಾ ಅದನ್ನು ಪಾರ್ಶ್ವಕ್ಕೆ ಸರಿಸಿದಾಗ ಉಚ್ಛ್ವಾಸನಿಶ್ವಾಸಗಳು ಸುಗಮವಾಗಿ ಪ್ರಜ್ಞೆ ಬಂದಿತು.

"ನಿಮ್ಮ ಸುಖಾಸನ ಇನ್ನು ಸ್ವಲ್ಪ ಹೊತ್ತು ಯಥಾಸ್ಥಾನದಲ್ಲಿದ್ದಿದ್ದರೆ ನಾಗರಿಕನನ್ನು ಹುಡುಕಿಕೊಂಡು ಈ ಯೋಧನೂ ಪ್ರೇತ ಲೋಕಕ್ಕೆ ಪಯಣ ಮಾಡುತ್ತಿದ್ದ"—ಎಂದಳು ಪ್ರಮೀಳಾ.

"ಒಂದು ಶವದ ಸಂಸ್ಕಾರವೇ ಈಗ ಸಮಸ್ಯೆಯಾಗಿ ಕುಳಿತಿದೆ. ಅದರ ಸಂಗಡ ಇದೂ ಸೇರಿದ್ದರೆ—"

"ಡಬ್ಬಲ್ ಸಮಸ್ಯೆಯಾಗುತ್ತಿತ್ತು. ಒಂಟಿಗಿಂತ ಜೋಡಿ ವಸ್ತುಗಳಲ್ಲಿ ಹೆಚ್ಚು ಆಕರ್ಷಣೆ. ಉದಾಹರಣೆಗೆ ಜೋಡಿಶಾಲು, ಜೋಡಿಹಾರ, ಜೋಡಿ ತಾಂಬೂಲ—"

ಪ್ರಮೀಳೆಯ ಹಾಸ್ಯ ಪ್ರವೃತ್ತಿ ರಮಾನಂದನಿಗೆ ಅಸಹನೀಯವಾಗಿ ಕಂಡಿತು. ಕೋಪದಿಂದ ಗರ್ಜಿಸಿ ಅವನು ಹೇಳಿದನು: "ಜೋಡಿ ಸಾರೋಟು, ಜೋಡಿ ಜನಿವಾರ, ಜೋಡಿ ಬಳೆ, ಜೋಡಿ ಲಾಯರು, ಜೋಡಿ ಸೀರೆ, ಎಲ್ಲ ವಸ್ತುಗಳೂ ಜೋಡಿ ಜೋಡಿಯಾಗಿರುವುದೇ ಪ್ರಪಂಚದ ಪದ್ಧತಿಯಂತ ಕಾಣುತ್ತದೆ. ಆದರೆ ಆ ಅವಿವೇಕಿ ಕಾಮೇಶ ಚೌದುರಿಯ ಅಜಾಗರೂಕತೆ ಯಿಂದ ನಾವು ಇಜ್ಜೋಡಿಯಂತೆ ಈ ಕೊಟಡಿಯಲ್ಲಿರಬೇಕಾಗಿದೆ."

ರಮಾನಂದನ ಮಾತು ಕೇಳಿ ಪ್ರಮೀಳೆಗೆ ನಗುಬಂದಿತು. ಅವಳು ಸುಂದರಿಯೆಂದೂ ಯೌವ್ವನವತಿಯೆಂದೂ ಹಿಂದೆ ತಿಳಿಸಿದ್ದೇವೆ. ವೀಣಾ

ಝುಂಕಾರದಂತೆ ಮಧುರವಾದ ಕಂಠ, ಯೌವ್ವನದ ಉನ್ಮಾದದಂತೆ ಪ್ರಗಲ್ಭವಾದ ನಗು ಅವಳ ವ್ಯಕ್ತಿತ್ವದ ಮುಖ್ಯ ಆಕರ್ಷಣೆಗಳಾಗಿದ್ದವು. ಆ ನಗುವಿನ ಕಲ ಧ್ವನಿಯೊಡನೆ ಪಾರ್ಶ್ವದ ಕೊಟಡಿಯಲ್ಲಿ ಎರಡು ಗಂಟೆ ಹೊಡೆದ ಶಬ್ಧ ಕೇಳಿಸಿತು. ಪ್ರಮೀಳಾ ನಗುವನ್ನು ನಿಲ್ಲಿಸಿ ನುಡಿದಳು.

"ಇದರಲ್ಲಿ ಚೌದುರಿಯು ಅಜಾಗರೂಕತೆಯೇನಿದೆ, ರಮಾನಂದರಾಯರೆ? ಚೂರಿಯಿರಿತದಿಂದ ಪ್ರಾಣ ಹೋದ ಒಬ್ಬ ನಾಗರಿಕ, ಮತ್ತೊಬ್ಬ ಯೋಧ ಬಂದಿ! ಪೂರ್ವ ರಂಗವನ್ನು ಚನ್ನಾಗಿ ಸಿದ್ಧಮಾಡಿ ಚೌದುರಿ ಇಲ್ಲಿಂದ ಕಾಲ್ತೆಗೆದರು. ಕಥೆ ಕಾದಂಬರಿಗಳ ನಾಯಕಿಯಂತೆ ನಾನು ಗಟ್ಟಿಯಾಗಿ ಚೀತ್ಕಾರ ಮಾಡಿ ಕುಸಿದು ಬಿದ್ದಿದ್ದರೆ ಆಗ ನನ್ನನ್ನೆತ್ತಿ ಸೋಪಾದ ಮೇಲೆ ಮಲಗಿಸಿ, ಕೈವಸ್ತ್ರದಿಂದ ಮುಖವನ್ನೊರೆಸುವ ಅವಕಾಶ ನಿಮಗೆ ಸಿಕ್ಕುತ್ತಿತ್ತು. ನೀರಿನ ಗ್ಲಾಸ್ ತಂದು ನನ್ನ ರಂಗಾದ ತುಟಿಗಳಿಗೆ ಹಿಡಿಯುತ್ತಿದ್ದಿರಿ. ನಾನು ಒಂದೇ ಗುಟುಕು ನೀರು ಕುಡಿದು, ತಾವರೆ ಕಣ್ಣುಗಳನ್ನು ತೆರೆದು, ಮಿಂಚಿನಂತಹ ಕಡೆ ನೋಟದಿಂದ ಕೊಟಡಿಯನ್ನೊಂದು ಸಾರಿ ಬೆಳಗಿ, ಪುನಃ ಭಯದಿಂದ ಕಿಟಾರನೆ ಕಿರಚಿ ಕೈಗಳಿಂದ ನಿಮ್ಮ ಕೊರಳನ್ನು ಆಲಿಂಗಿಸಿಕೊಳ್ಳುತ್ತಿದ್ದೆ. ಆಗ ನಮ್ಮ ತುಟಿಗಳ ಮಿಳನವಾಗುತ್ತಿತ್ತು. ಆ ರೀತಿ ಆಗದಿದ್ದುದು ನನ್ನ ಜಾಗರೂಕತೆಯಿಂದ. ಚೌದುರಿಯ ಅಚಾತುರ್ಯದಿಂದಲ್ಲ."

ಈ ಮಾತನ್ನು ಓದುವಾಗ ಅದರಲ್ಲೇನೋ ಸಂಕೇತ, ಅಂತರಾರ್ಥ, ರಹಸ್ಯ ಅಶ್ಲೀಲ ಇರುವಂತೆ ವಾಚಕರು ಭಾವಿಸಬಹುದು. ಆದರೆ ವಾಸ್ತವದಲ್ಲಿ ಪ್ರಮೀಳಾ ಈ ಮಾತುಗಳನ್ನು ಹೇಳಿದ ರೀತಿ, ಆಗಿನ ಅವಳ ಕಂಠಸ್ವರ, ಮುಖ ಭಂಗಿ ಇವು ಮೇಲಿನ ಯಾವುದೊಂದು ಭಾವಕ್ಕೂ ಪೋಷಕವಾಗಿದ್ದಂತೆ ಕಾಣಲಿಲ್ಲ. ಅದಕ್ಕೆ ಪ್ರತಿಯಾಗಿ ಕಾಮ ಪ್ರೇಮಗಳ ಗಂಧವೂ ಇಲ್ಲದ ವೈರಾಗ್ಯದ ಶುಷ್ಕಕಂಠದಿಂದ ಅವಳು ಈ ಮಾತುಗಳನ್ನು ಹೇಳಿದಳು. ಎರಡು ವರ್ಷಗಳಿಂದ ಪ್ರಮೀಳಾ ರಮಾನಂದನ ಆಪ್ತ ಕಾರ್ಯದರ್ಶಿನಿಯಾಗಿ ಕಛೇರಿಯಲ್ಲಿ ಕೆಲಸ ಮಾಡಿದ್ದಳು. ಆದರೆ ಒಂದು ದಿನ ಕೂಡಾ ರಮಾನಂದ ಅವಳಿಂದ ಆಕರ್ಷಿತನಾಗಿರಲಿಲ್ಲ. ಅವಳು ರೂಪವತಿಯೆಂಬುದನ್ನೂ ಗಮನಿಸಿರಲಿಲ್ಲ. ಕಛೇರಿಯ ಕೆಲಸ ಕಾರ್ಯಗಳ ನಿರ್ವಹಣೆಯಲ್ಲಿ ಅವಳ ದಕ್ಷತೆ ಆಸಕ್ತಿಗಳನ್ನು ತಿಳಿದು ಅನೇಕ ಮುಖ್ಯ ಕಾರ್ಯಗಳನ್ನು ಅವಳಿಗೊಪ್ಪಿಸಿದ್ದನು. ಈ ದಿನ

ಮೊದಲಸಾರಿ ಅಪಾಯದೆದರು ಅವಳ ಧೈರ್ಯ ಸ್ಥೈರ್ಯ ಸಾಹಸಗಳನ್ನು ಕಂಡು ಅವನ ಕಣ್ಣುಗಳು ಅರಳಿದವು. ಪ್ರಮೀಳಾ ಎಂತಹ ಸಾಹಸಿಯೋ ಅಷ್ಟೇ ಸೌಂದರ್ಯವತಿಯೆಂದೂ ಅರಿತನು. ಅವನ ಇಂದ್ರಿಯಗಳು ಅವನ ಅರಿವಿಲ್ಲದಂತೆ ಅವಳ ಕಡೆಗೆ ಸೆಳೆಯಲ್ಪಟ್ಟವು. ಪ್ರತಿ ಕ್ಷಣದಲ್ಲಿ ಅವಳ ಆ ಚುಚ್ಚು ಮಾತುಗಳು ಅವನ ಉತ್ಸಾಹವನ್ನು ಭಂಗ ಪಡಿಸಿದವು.

ಕ್ಷಣಕಾಲ ಇಬ್ಬರೂ ಮಾತಾಡಲಿಲ್ಲ.

" ನೀನು ನಮ್ಮ ಕಛೇರಿಗೆ ಬರುವ ಮೊದಲು ಚೌದುರಿಯ ಹತ್ತಿರ ಸೆಕ್ರೆಟರಿಯಾಗಿದ್ದದ್ದು ನಿಜವೇ ?"

ಪ್ರಮೀಳಾ ತಲೆಯಾಡಿಸಿ ಹೌದೆಂದು ಉತ್ತರ ಕೊಟ್ಟಳು.

" ಹಾಗಾದರೆ ಪತ್ತೆದಾರಿ ಕೆಲಸ ನಿನಗೆ ತಕ್ಕಮಟ್ಟಿಗೆ ಅನುಭವವಿರಬೇಕು. ಇಂತಹ ಸಂದರ್ಭದಲ್ಲಿ ಏನು ಮಾಡಬೇಕೆಂದು ಚೌದುರಿ ಹೇಳುತ್ತಾನೆ ?"

ಪುನಃ ರಮಾನಂದ್ ಪ್ರಶ್ನಿಸಿದನು.

" ನಾಗರಿಕನು ಯಾರೆಂಬುದನ್ನು ನಾವು ಮೊದಲು ಪತ್ತೆ ಮಾಡಬೇಕು. ನವಾಬನೊಡನೆ ನಡೆದ ಮಾತುಕತೆಗಳಿಂದ ಅವನ ವಿಚಾರ ನಮಗೆ ಸ್ವಲ್ಪ ಮಟ್ಟಿಗೆ ಗೊತ್ತಾಗಿದೆ. ಅವನ ಜೇಬಿನಲ್ಲಿರುವ ಕಾಗದ ಪತ್ರಗಳನ್ನು ಪರೀಕ್ಷಿಸಿದರೆ ಉಳಿದ ವಿಷಯಗಳು ತಿಳಿಯುವವು."

ಸಲಹೆಯಂತೆ ರಮಾನಂದ್ ನಾಗರಿಕನ ಜೇಬುಗಳನ್ನು ಹುಡುಕಿದ. ರಾಜಕೋಟೆಯ ಬ್ಯಾಂಕೊಂದರ ಮೇಲೆ ೫೦೦ ರೂಪಾಯಿಗಳ ಚಕ್. ಲಕೋಟೆಯಲ್ಲಿದ್ದ ಒಂದು ಕಾಗದ ಮತ್ತು—

ರಮಾನಂದ್ ಆಶ್ಚರ್ಯದಿಂದ ನಾಗರಿಕನ ಜೇಬಿನಲ್ಲಿ ಸಿಕ್ಕಿದ ಆ ವಸ್ತುವನ್ನು ಪ್ರಮೀಳೆಗೆ ತೋರಿಸಿದ. ತಾನು ಕಿಷನ್‌ಚಂದನಿಗೆ ಕೊಟ್ಟ ಸಂಕೇತ, ಕಮಲ ಮತ್ತು ತ್ರಿಶೂಲದ ಗುಂಡಿ !

" ಇದು ಇವನ ಹತ್ತಿರ ಹೇಗೆ ಬಂತು !" ರಮಾನಂದ್ ಆಶ್ಚರ್ಯದಿಂದ ಹೇಳಿದ.

" ಕಿಷನ್‌ಚಂದರೇ ಕೊಟ್ಟಿರಬಹುದು, ಈ ಚೆಕ್ಕಿನಲ್ಲಿ ಯಾರ ರುಜುವಿದೆ ನೋಡಿ."

" ಕಿಷನ್‌ಚಂದ್. ರುಜು ನನಗೆ ಚನ್ನಾಗಿ ನೆನಪಿದೆ, ಪ್ರಮೀಳಾ. ಎರಡು ದಿನಗಳ ಹಿಂದೆ ಬರೆದ ಚೆಕ್. ಅಂದ ಮೇಲೆ ನಾಗರಿಕನು ಕಿಷನ್ ಚಂದನ ಕಡೆಯವನೇ ಆಗಿರಬಹುದು."

" ನನಗೂ ಹಾಗೆಯೇ ಕಾಣುತ್ತದೆ. ಸೇತುವೆಯ ಮೇಲೆ ಇವನನ್ನು ಪೋಲೀಸರು ಆಕ್ರಮಣ ಮಾಡಿದ ಕಾರಣವೇನು ಎಂಬುದು ನನಗಿನ್ನೂ ಅರ್ಥವಾಗಿಲ್ಲ."

" ಚೌದುರಿ ಹಿಂದಿರುಗಿದಾಗ ಅದು ನಮಗೆ ಅರ್ಥವಾಗುವುದು. ಈಗ ನಾವು ಈ ಯೋಧನ ಪರಿಚಯ ಮಾಡಿಕೊಳ್ಳಬೇಕು—ಅವನಿಗೆ ಪ್ರಜ್ಞೆ ಬರುವುದರೊಳಗಾಗಿ."

ರಮಾನಂದ್ ಯೋಧನ ಜೇಬುಗಳನ್ನು ಹುಡುಕಿದಾಗ ಪೋಲೀಸ್ ಅಧಿಕಾರಿಯ ಪರಿಚಯದ ಕಾರ್ಡೊಂದು ದೊರಕಿತು. ದೀಪದ ಬೆಳಕಿನಲ್ಲಿ ರಮಾನಂದ್ ಓದಿದನು. ಬಾಬರ್‌ವಾಡ್ ಸಂಸ್ಥಾನದ ಪೋಲೀಸ್ ಶಾಖೆಯ ಡಿಟೆಕ್ಟಿವ್ ಅಧಿಕಾರಿ ೯೩—ಎಂದು ಪರಿಚಯ ಪತ್ರದಲ್ಲಿ ಬರೆಯಲ್ಪಟ್ಟಿತ್ತು. ಹೆಸರು ಪತ್ತೆ ಮುಂತಾದವೇನೂ ಇರಲಿಲ್ಲ.

" ಬಾಬರ್ ವಾಡ್ ಎಂತ ಒಂದು ಸಂಸ್ಥಾನವಿಧೆಯೇ? ಇದುವರೆಗೆ ನಾನು ಆ ಹೆಸರೇ ಕೇಳಿಲ್ಲ."

" ಸೌರಾಷ್ಟ್ರದಲ್ಲಿ ೫೦೦ ಚಿಲ್ಲರೆ ದೇಶೀಯ ಸಂಸ್ಥಾನಗಳಿವೆಯೆಂದು ಭೂಗೋಳಶಾಸ್ತ್ರದಲ್ಲಿ ಓದಿದ ನೆನಪು. ಅವುಗಳಲ್ಲಿ ಇದೂ ಒಂದಾಗಿರಬಹುದು."

ಪ್ರಮೀಳಾ ಉತ್ತರ ಕೊಟ್ಟಳು.

" ಸದ್ಯದಲ್ಲಿ ಅವನು ಭಾರತದ ಪೋಲೀಸ್ ಅಧಿಕಾರಿಯಲ್ಲವೆಂಬುದು ನನಗೆ ಸಮಾಧಾನ. ದೇಶೀಯ ಸಂಸ್ಥಾನಗಳ ಪೋಲೀಸರು ಇಲ್ಲಿ ಭಾರತ

ಪೋಲೀಸ್ ಸಹಾಯವಿಲ್ಲದೆ ಏನೂ ಮಾಡಲಾಗುವುದಿಲ್ಲ. ಇಲ್ಲಿಯ ಪೋಲೀಸ್ ಸೂಪರಿಂಡೆಂಟ್ ನನಗೆ ಪರಿಚಿತನು. ಬೆಳಿಗ್ಗೆ ಅವನನ್ನು ನೋಡುತ್ತೇನೆ."

ರಮಾನಂದ್ ನುಡಿದನು.

"ಅಲ್ಲಿಯವರೆಗೆ ಇವನು ಈ ಕೊಟಡಿಯಲ್ಲಿ ಬಂದಿಯಾಗಿರಬೇಕೇ ?"

"ಏನು ಮಾಡಬೇಕೆಂದು ಹೇಳುವೆ, ಪ್ರಮೀಳಾ ?"

"ನಾನು ನಿಮ್ಮಂತೆ ಗಂಡಸಾಗಿದ್ದಿದ್ದರೆ ರಸ್ತೆಗೆ ಹೊತ್ತುಕೊಂಡು ಹೋಗಿ ಮಲಗಿಸಿ ಪಾರ್ಶ್ವದಲ್ಲಿ ಒಂದು ಚೂರಿಯಿಟ್ಟು ಬರುತ್ತಿದ್ದೆ. ಪ್ರಜ್ಞೆ ಬಂದಮೇಲೆ ಕಟ್ಟುಗಳನ್ನು ಬಿಚ್ಚಿಕೊಂಡು ಪರಾರಿಯಾಗುತ್ತಿದ್ದ."

"ಕಾಮೇಶ್ ಈಗ ಇಲ್ಲಿದ್ದರೆ ಆ ಕೆಲಸ ಮಾಡುತ್ತಿದ್ದನೇ ?"

"ಅವರು ಏನು ಮಾಡುತ್ತಿದ್ದರೆಂಬುದನ್ನು ತಿಳಿಯಲು ಯಾರಿಗೂ ಸಾಧ್ಯವಲ್ಲ. ಓತಿಕೇತನ ಬಣ್ಣದಂತೆ ಅವರ ಕಾರ್ಯ ವಿಧಾನ ಪ್ರತಿಕ್ಷಣಕ್ಕೆ ಪರಿಸ್ಥಿತಿಗನುಸಾರವಾಗಿ ಬದಲಾಯಿಸುತ್ತದೆ. ಬೆಳಕು ಹರಿಯುವುದರೊಳಗಾಗಿ ನಾವು ಎರಡು ದೇಹಗಳ ವ್ಯವಸ್ಥೆ ಮಾಡಬೇಕು. ಬಂದಿಯ ವಿಚಾರ ಮೊದಲು ಮುಗಿಸಿದರೆ ಆ ಮೇಲೆ ನಾಗರಿಕನ ಸಂಸ್ಕಾರ ಯೋಚಿಸಬಹುದು."

"ನಿನ್ನ ಸಲಹೆ ಸರಿಯಾಗಿದೆ, ಪ್ರಮೀಳಾ. ಆದರೆ ಹೊರಗೆ ಹೋಗುವುದು ಹೇಗೆ? ಬಾಬರ್ ವಾಡ್ ಪೋಲೀಸ್ ದಳದವರು ನಮಗಾಗಿ ಹೊರಗೆ ಕಾದಿರಬಹುದು. ಹೆಗಲ ಮೇಲೆ ದೇಹವೊಂದನ್ನು ಹೊತ್ತುಕೊಂಡು ಅವರ ಸಂಗಡ ಹೋರಾಡಲು ನಾನೇನು ಪತ್ತೇದಾರನೇ ? ಬೆಳಗಾಗುವತನಕ ಬಿಡಾರದ ಬಾಗಿಲು ತೆಗೆಯದೆ ಒಳಗಿದ್ದರೇ ಒಳ್ಳೆಯದು."

"ಲಾಯರಾಗಲಿ, ಬ್ಯಾರಿಸ್ಟರಾಗಲಿ ವಕೀಲರ ಶೌರ್ಯ ಪ್ರತಾಪವೆಲ್ಲಾ ಕೋರ್ಟ ಹಾಲಲ್ಲಿ, ಬಾರ್ ಅಸೋಸಿಯೇಷನ್ನಿನಲ್ಲಿ, ಅಲ್ಲವೇ ?" ಪ್ರಮೀಳಾ ನಗುತ್ತ ಹೇಳಿದಳು.

"ಹೌದು ಹೆಂಗಸರ ಶೌರ್ಯ ಅಂತಃಪುರದಲ್ಲಿ, ಪತಿಯ ಮುಂದೆ, ವಕೀಲರ ಶೌರ್ಯ ಕಛೇರಿಯಲ್ಲಿ ಕಕ್ಷಿಗಾರರ ಮುಂದೆ"

ರಮಾನಂದನೂ ನಗುತ್ತಲೆ ಉತ್ತರ ಕೊಟ್ಟನು.

ಒಂದು ಗಂಟೆಯ ತರುವಾಯ ಕೊಟಡಿಯ ಬಾಗಿಲನ್ನು ಹೊರಗಿಂದ ಯಾರೋ ತಟ್ಟಿದ ಶಬ್ಧವಾಯಿತು. "ಪುನಃ ಮತ್ತೇನು ಬಂತು!" ಎಂದು ರಮಾನಂದ್ ಎದ್ದು ನಿಂತನು.

ಪ್ರಮೀಳಾ ಮಾತಾಡಲಿಲ್ಲ. ಕಿವಿಯರಳಿಸಿ ಹೊರಗೇನಾದರೂ ಶಬ್ಧ ವಾಗುತ್ತಿದೆಯೇ ಎಂದು ಎಚ್ಚರದಿಂದ ಕೇಳಿದಳು. ಆ ಮೇಲೆ ರಮಾನಂದ ನೊಡನೆ "ಬಾಗಿಲು ತೆಗೆದುಬಿಡಬೇಡಿ. ಅವರಾರೆಂಬುದನ್ನು ಮೊದಲು ತಿಳಿದುಕೊಳ್ಳೋಣ" ಎಂದಳು.

ಇಬ್ಬರೂ ಬಾಗಿಲ ಹತ್ತಿರ ಹೋದರು. ರಮಾನಂದ್ ಕಂಪಿತ ಸ್ವರ ದಿಂದ "ಯಾರದು? ಏನು ಬೇಕು?" ಎಂದು ಕೇಳಿದನು.

ಅಪರಿಚಿತ ಕಂಠದಿಂದ ಉತ್ತರ ಬಂದಿತು: "ಬೊಂಬಾಯಿನ ರಮಾನಂದ್‌ರನ್ನು ದಸ್ತಗಿರಿ ಮಾಡಲು ವಾರೆಂಟ್ ತಂದಿದ್ದೇನೆ. ಅವರು ಕೊಟಡಿಯಲ್ಲಿರುವರೆ?"

ರಮಾನಂದನ ದೇಹ ಕಂಪಿಸತೊಡಗಿತು. "ಏನು ಮಾಡುವುದು ಪ್ರಮಿಳಾ?" ಎಂದು ಮೆಲ್ಲನೆ ಕೇಳಿದ.

"ಅವರು ಭಾರತದ ಪೋಲೀಸರೋ, ಸಂಸ್ಥಾನೀ ಪೋಲೀಸರೊ ತಿಳಿದು ಕೊಳ್ಳಿ."

"ಸತ್ತಮೇಲೆ ಸುಟ್ಟರೂ ಒಂದೇ, ಹೂಳಿದರೂ ಒಂದೇ. ದಸ್ತಗಿರಿಯಾಗ ಬೇಕಾಗಿರುವಾಗ ಯಾವ ಪೋಲೀಸರಾದರೇನು?" ರಮಾನಂದ್ ನಿರಾಶೆಯಿಂದ ಹೇಳಿದ.

"ಸತ್ತವರಿಗೆ ಎರಡೂ ಒಂದೇ. ಬದುಕಿರುವವರಿಗೆ ತೊಂದರೆ. ಹೂಳು ವುದಕ್ಕೆ ಕರ್ಚಿಲ್ಲ. ಸುಡಬೇಕಾದರೆ ಸೌದೆ ಹೊಂಚಬೇಕು" ಪ್ರಮೀಳಾ ನಗುತ್ತ ಉತ್ತರ ಕೊಟ್ಟಳು.

"ಆಗಲೇ ನನ್ನನ್ನು ಸತ್ತವನನ್ನ ಮಾಡಿ ಬಿಟ್ಟೆಯ, ಪ್ರಮೀಳಾ! ನೀನು

ಚೌದರಿ ನನ್ನನ್ನು ಯಾವ ಗತಿಗೆ ತಂದು ಬಿಟ್ಟಿರಿ"—ರಮಾನಂದ್ ವಿಷಾದದಿಂದ ನುಡಿದ.

ಒಳಗೆ ಈ ಮಾತು ನಡೆಯುತ್ತಿದ್ದಾಗ ಹೊರಗೆ ಬಾಗಿಲು ತಟ್ಟುತ್ತಿದ್ದ ವ್ಯಕ್ತಿ. ಅಸಹನೆಯಿಂದ ಗರ್ಜಿಸಿ "ಹತ್ತು ಎಣಿಸುವುದರೊಳಗಾಗಿ ತೆರೆಯದೆ ಹೋದರೆ ಬಾಗಿಲು ಮುರಿದುಕೊಂಡು ಒಳಗೆ ಬರುತ್ತೇವೆ" ಎಂದು ಹೇಳಿದನು.

ಪ್ರಮೀಳಾ ಧ್ವನಿ ಕರ್ಕಶ ಮಾಡಿಕೊಂಡು ಉತ್ತರ ಕೊಟ್ಟಳು. "ಈ ಕಡೆ ಜೋಡಿ ಪಿಸ್ತೂಲು ಹಿಡಿದು ಇಬ್ಬರು ನಿಂತಿದ್ದೇವೆ. ಗುಂಡಿಗೆ ಬಲಿಯಾಗುವ ಆಸೆಯಿದ್ದರೆ ಒಳಗೆ ಬನ್ನಿ"

"ನಮ್ಮಲ್ಲಿ ಆರು ತೋಟಗಳ ನಾಲ್ಕು ಪಿಸ್ತೂಲುಗಳಿವೆ. ತೆಗೆಯದಿದ್ದರೆ ಹೋಟಲನ್ನೇ ಸುಟ್ಟು ಹಾಕುವೆವು" ಎಂದು ಹೇಳಿ ಅಪರಿಚಿತನು ಒಂದು ಎರಡು ಎಂದು ಎಣಿಸಲು ಪ್ರಾರಂಭಿಸಿದನು.

"ಬಾಗಿಲು ತೆರೆದು ಬಿಡು ಪ್ರಮೀಳಾ. ಇಷ್ಟೆಲ್ಲ ರಗಳೆಯೇಕೆ? ನಾನು ದಸ್ತಗಿರಿಯಾಗಲು ಸಿದ್ಧನಾಗಿದ್ದೇನೆ" ರಮಾನಂದ್ ಅಂಗಲಾಚುತ್ತ ಕೇಳಿಕೊಂಡ.

"ನಿಮ್ಮ ಎಣಿಕೆ ನಿಲ್ಲಿಸಿ, ಇದು ಪ್ರಾಥಮಿಕ ಪಾಠಶಾಲೆಯಲ್ಲ, ನೀವು ಕಾಮೇಶ್ ಚೌದುರಿ ಅಲ್ಲದೆ ಹೋದರೆ ಬಾಗಿಲು ತೆಗೆಯುತ್ತೇನೆ"—ಪ್ರಮೀಳಾ ಸಹಜ ಕಂಠದಿಂದ ಹೇಳಿದಳು.

ಹೊರಗೆ ಎಣಿಕೆ ನಿಂತಿತು. ಗಟ್ಟಿಯಾಗಿ ನಗುತ್ತಾ "ಈ ಹುಡುಗಾಟ ಸಾಕುಮಾಡಿ ಬಾಗಿಲು, ತೆಗೆ ಪ್ರಮೀಳಾ. ಒಂದೊಂದು ನಿಮಿಷವೂ ನಮಗೆ ಅಮೂಲ್ಯ" ಎಂದು ಕಾಮೇಶ್ ಹೇಳಿದನು.

ಪ್ರಮೀಳಾ ಬಾಗಿಲು ತೆರೆದಾಗ ಕಾಮೇಶನ ಸಂಗಡ ಒಳಗೆ ಬಂದ ವೃದ್ಧನನ್ನು ಕಂಡು ರಮಾನಂದ್ ಚಕಿತನಾದನು. "ನೀನು ರಾಜಕೋಟೆಗೆ ಹುಡುಕಿಕೊಂಡು ಬಂದ ಶ್ರೀಮಂತ ಸದ್ಗೃಹಸ್ಥರು ಇವರೇ ನೋಡು ರಮಾನಂದ್" ಎಂದು ಕಾಮೇಶ್ ಹೇಳಿದಾಗ ಉತ್ತರ ಕೊಡುವ ಶಕ್ತಿಯೂ ಅವನಿಗಿರಲಿಲ್ಲ.

ವೃದ್ಧನು ರಮಾನಂದನ ಕೈಹಿಡಿದು "ನಿಮ್ಮಿಂದ ನಾನು ಉಳಿದುಕೊಂಡೆ ರಮಾನಂದರಾಯರೆ. ಪಾಪ! ಪ್ರಾಣ ತೆತ್ತರೂ ತನ್ನ ಕೆಲಸ ಮಾಡಿದ" ಎಂದು ಕೃತಜ್ಞತೆಯಿಂದ ನುಡಿದ.

"ಅದೆಲ್ಲ ಆ ಮೇಲೆ. ನಾವು ಈ ಕೂಡಲೆ ಈ ಹೋಟಲನ್ನು ಬಿಡದೆ ಹೋದರೆ ಸೌರಾಷ್ಟ್ರದ ಐನೂರು ಅರವತ್ತು ಸಂಸ್ಥಾನಗಳ ಪೋಲೀಸ್ ಅಧಿಕಾರಿಗಳೂ ನಮ್ಮ ಹಿಂದೆ ಬೀಳುವರು. ಕಿಷನ್‌ಚಂದ್, ಈ ವ್ಯಕ್ತಿ ನಿಮ್ಮ ಕಡೆಯವನೇ ನೋಡಿ" ಎನ್ನುತ್ತಾ ಕಾಮೇಶ್ ವೃದ್ಧನನ್ನು ನಾಗರಿಕನ ಶವವನ್ನು ಮಲಗಿಸಿದ್ದ ಮಂಚದ ಹತ್ತಿರ ಕರೆದುಕೊಂಡು ಹೋದನು.

"ಹೌದು. ಇವನು ನನ್ನ ಭೃತ್ಯ. ಸಂಸ್ಕಾರಕ್ಕೆ ನಾವೇ ಏರ್ಪಡಿಸಬೇಕು."—ವೃದ್ಧನು ನುಡಿದನು.

"ಹಾಗಾದರೆ ಕಾರಿಗೊಬ್ಬ ಪ್ಯಾಸಿಂಜರ್ ಸಿಕ್ಕಂತಾಯಿತು. ನಿನ್ನ ಬಂದಿಯನ್ನೇನು ಮಾಡುವೆ ರಮಾನಂದ್?" ಕಾಮೇಶ್ ಪ್ರಶ್ನಿಸಿದನು.

"ಅವನು ಅದಾವುದೋ ಬಾಬರ್‌ವಾಡ್ ಸಂಸ್ಥಾನದ ಪೋಲೀಸ್ ಅಧಿಕಾರಿಯಂತೆ. ಇನ್ನೂ ಪ್ರಜ್ಞೆಯಿಲ್ಲದೆ ಮಲಗಿದ್ದಾನೆ."

ಕಾಮೇಶನಿಗೆ ಬಂದಿಯ ಗುರುತಾಯಿತು, "ಇವನನ್ನು ನಾವು ಮೊದಲು ನೋಡಿದ್ದದ್ದು ಸೇತುವೆಯ ಮೇಲೆ. ಕಟ್ಟುಗಳನ್ನು ಬಿಚ್ಚಿ ಅಲ್ಲೇ ಮಲಗಿಸಿಬಿಟ್ಟರಾಯಿತು. ಸಾಮಾನುಗಳನ್ನು ಕಟ್ಟು, ಪ್ರಮೀಳಾ. ನಾವು ಬಂದಷ್ಟೇ ನಿಶ್ಶಬ್ಧವಾಗಿ ಇಲ್ಲಿಂದ ಹೊರಟು ಹೋಗಬೇಕು."

"ಹೋಟಲ್ ಬಿಲ್ ಕೊಡಬೇಡವೇ?"

"ಅದಕ್ಕೆಲ್ಲ ಈಗ ಸಮಯವಿಲ್ಲ" ಎಂದು ಕಾಮೇಶ್ ತನ್ನ ಟ್ರಂಕ್ ಮುಂತಾದವನ್ನು ತೆಗೆದು ತೋಟದ ಪೌಳಿ ಗೋಡೆಯ ಹತ್ತಿರಿಟ್ಟನು. ರಮಾನಂದ್ ಪ್ರಮೀಳಾ ಹಾಗೆಯೇ ಮಾಡಿದರು. ಒಂದೆರಡು ನಿಮಿಷಗಳಲ್ಲಿಯೇ ಚೌದುರಿ ಅವುಗಳನ್ನು ಹೊರಗೆ ಸಾಗಿಸಿ ಕಾರಲ್ಲಿಟ್ಟನು. ನಾಗರಿಕನ

ಮೃತದೇಹ ಮತ್ತು ಬಂದಿಯನ್ನು ಸಾಗಿಸುವಾಗ ರಮಾನಂದ್ ಸಹಾಯ ಮಾಡಿದನು.

ಹೋಟೆಲ್ ಗಡಿಯಾರದಲ್ಲಿ ನಾಲ್ಕುಗಂಟೆ ಹೊಡೆಯುತ್ತಿದ್ದಂತೆ ಕಾರ್ ಹೋಟೆಲನ್ನು ಬಿಟ್ಟಿತು. ಸೇತುವೆಯ ಮೇಲೆ ಕಾರು ನಿಲ್ಲಿಸಿ ಬಂದಿಯ ಕಟ್ಟುಗಳನ್ನು ಬಿಚ್ಚಿ ಕಾಲು ಹಾದಿಯ ಮೇಲೆ ಮಲಗಿಸಿ ಕಾಮೇಶ್ "ಈಗೆಲ್ಲಿ ಹೋಗುವುದು, ಕಿಷನ್‌ಚಂದರೆ?" ಎಂದು ಕೇಳಿದನು.

"ಸೌರಾಷ್ಟ್ರದ ೫೬೦ ಸಂಸ್ಥಾನಿಕರಲ್ಲಿ ನನ್ನ ಆಪ್ತನೊಬ್ಬನಿದ್ದಾನೆ. ಅವನ ಅರಮನೆಗೆ ಹೋಗೋಣ" ಎಂದು ಕಿಷನ್‌ಚಂದ್ ಉತ್ತರ ಕೊಟ್ಟನು.

ಕಾರ್ ಚಲಿಸಿತು.



# ಹನ್ನೊಂದನೆಯ ಪರಿಚ್ಛೇದ

ಕಾಮೇಶ್ ಕಾರನ್ನು ಸೇತುವೆಯ ಹತ್ತಿರ ನಿಲ್ಲಿಸಿದನು.

"ಇಲ್ಲೇಕೆ ನಿಲ್ಲಬೇಕು? ಈ ಸೇತುವೆಯನ್ನು ಕಂಡರೇ ನನಗೆ ಮೈ ನಡುಗುತ್ತದೆ. ನಾವಿಲ್ಲಿಗೆ ತಿರುಗಾಡಲು ಬಂದು ಇನ್ನೂ ಆರು ಗಂಟೆ ಕಳೆದಿಲ್ಲ. ಆ ಸ್ವಲ್ಪ ಕಾಲದಲ್ಲಿ ಎಷ್ಟು ವಿಚಿತ್ರಗಳು ನಡೆದು ಹೋಗಿವೆ!"—ರಮಾನಂದ್ ಆಶ್ಚರ್ಯದಿಂದ ನುಡಿದನು.—

"ಬಾಡಿಗೆಯಿಲ್ಲದೆ ಈ ಮನುಷ್ಯನನ್ನು ನಾವು ಬಾಬರ್‌ವಾಡಿಗೆ ಕರೆದುಕೊಂಡು ಹೋಗಿ ಬಿಡುವುದು ಸಾಧ್ಯವೇ? ಮೊದಲು ಇವನನ್ನು ನೋಡಿದ್ದು ಸೇತುವೆಯ ಮೇಲೆ. ಇಲ್ಲಿಯೇ ಬಿಟ್ಟುಹೋಗೋಣ"

ಎನ್ನುತ್ತ ಕಾಮೇಶ್ ಹಗ್ಗದಿಂದ ಕೈಕಾಲು ಕಟ್ಟಿದ್ದ ಅಪರಿಚಿತ ಯೋಧ ನನ್ನು ಕಾರಿಂದೆತ್ತಿ ಕಾಲು ಹಾದಿಯಲ್ಲಿ ಮಲಗಿಸಿದ. ಜೇಬಿಂದ ಚೂರಿ ತೆಗೆದು ಕಟ್ಟುಗಳನ್ನು ಎರಡು ಮೂರು ಕಡೆ ಕತ್ತರಿಸಿದ.

"ನಮ್ಮ ಕೆಲಸ ಮುಗಿಯಿತು: ಪ್ರಜ್ಞೆ ಬಂದು ಪಕ್ಕಕ್ಕೆ ತಿರುಗಿದರೆ ಕಟ್ಟುಗಳು ಬಿಚ್ಚಿಕೊಳ್ಳುವವು. ಆ ಮೇಲೆ ಇಷ್ಟಬಂದ ಕಡೆಗೆ ಹೋಗಲಿ."

ಕಾಮೇಶ್ ಕಾರನ್ನು ಪುನಃ ಓಡಿಸುತ್ತಾ ಹೇಳಿದ.

"ಮರೆತು ಹೋದೆ ಕಾಮೇಶ್. ಯೋಧನ ಪರಿಚಯದ ರಹದಾರಿ ನನ್ನ ಹತ್ತಿರಿದೆ!"—ರಮೇಶ್ ನುಡಿದ.

"ಅದನ್ನು ಏನು ಮಾಡಬೇಕೆಂದು ನಿನ್ನ ಇಷ್ಟ?"

"ಅವನ ವಸ್ತುವನ್ನು ಅವನಿಗೆ ಕೊಡುವುದು ನಮ್ಮ ಧರ್ಮ."

"ನಿಮ್ಮ ಆ ಧರ್ಮದ ಆವರಣದಲ್ಲಿ ಪತ್ತೆದಾರರು ಪೋಲೀಸರು ಸೇರುವುದಿಲ್ಲ, ರಮಾನಂದ್. ನಮ್ಮ ವೃತ್ತಿಯ ಮೊದಲ ಸೂತ್ರ "ಸಿಕ್ಕಿದ್ದನ್ನು ಸಂಗ್ರಹಿಸಿಕೋ" ಎಂದು. ಯಾವ ವಸ್ತು ಯಾವಾಗ ಬೇಕಾಗುವುದೋ ಯಾರು ಬಲ್ಲರು? ಯೋಧನ ರಹದಾರಿ ಮುಂದೆ ನಮಗೆ ಉಪಯೋಗವಾಗಬಹುದು?"

"ನೀನೊಬ್ಬ ನಿರರ್ಥಕ ಆಶಾವಾದಿ, ಕಾಮೇಶ್. ನಾವು ಬಾಬರ್ ವಾಡಿಗೆ ಹೋದರಲ್ಲವೇ ನಮಗೆ ಆ ರಹದಾರಿಯ ಉಪಯೋಗ?"

"ನಾವೀಗ ಬಾಬರ್‌ವಾಡ್ ಕಡೆಗೇ ಹೋಗುತ್ತಿರುವುದು"—ಕಿಷನ್ ಚಂದ್ ಹೇಳಿದನು.

ರಮಾನಂದ್ ಆಶ್ಚರ್ಯದಿಂದ—"ನಾವು ರಾಜಕೋಟೆಯನ್ನು ಬಿಟ್ಟು ಇನ್ನೂ ಎರಡು ಮೈಲಿ ಕೂಡಾ ಬಂದಿಲ್ಲ, ಆಗಲೆ ಬಾಬರ್‌ವಾಡ್ ಸಿಕ್ಕಿತೇ?"

"ವಾಸ್ತವದಲ್ಲಿ ಸಿಕ್ಕಲಿಲ್ಲ. ಸಂಸ್ಥಾನ ಇಲ್ಲಿಂದ ದೂರವಿದೆ. ಸುತ್ತು ಮುತ್ತಿನ ಒಂದೆರಡು ಗ್ರಾಮಗಳು ಮಾತ್ರ, ಅದಕ್ಕೆ ಸೇರಿದೆ"—ಕಿಷನ್ ಚಂದ್ ಉತ್ತರಿಸಿದ.

ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ. ಸೌರಾಷ್ಟ್ರ ಸಂಸ್ಥಾನಗಳ ಬಗೆಗೆ ತಾನು ಆಗಾಗ ಪತ್ರಿಕೆಗಳಲ್ಲಿ ಓದಿದ್ದ ಅನೇಕ ವಿಚಾರಗಳು ರಮಾನಂದನ ನೆನಪಿಗೆ ಬಂದವು. ಮುಂದೆ ದಾರಿ ಕವಲೊಡೆದಾಗ ಕಾಮೇಶ್ ಕಾರನ್ನು ನಿಲ್ಲಿಸಿ ಕಿಷನ್‌ಚಂದನ ಕಡೆ ತಿರುಗಿ "ನಾವು ಯಾವ ಕಡೆ ಹೋಗಬೇಕು ?" ಎಂದು ಪ್ರಶ್ನಿಸಿದ.

"ಬಲಕ್ಕೆ ತಿರುಗಿ ಅರ್ಧ ಗಂಟೆ ಪ್ರಯಾಣ ಮಾಡಿದರೆ ನಾವು ಗೊತ್ತಾದ ಸ್ಥಳವನ್ನು ತಲಪುವೆವು."—ಕಿಷನ್ ಚಂದ್ ಉತ್ತರಕೊಟ್ಟನು.

ಪುನಃ ಕಾಮೇಶ್ ಕಾರ್ ನಿಲ್ಲಿಸಿದ್ದು ದೊಡ್ಡ ಜಲಾಶಯವೊಂದರ ತೀರದಲ್ಲಿ ಕಟ್ಟಲ್ಪಟ್ಟಿದ್ದ ವಿಶಾಲವಾದ ಬಂಗಲೆಯ ಮುಂದೆ. ಕಿಷನ್‌ಚಂದ್ ಕಾರಿಂದಿಳಿದು ಒಳಗೆ ಹೋಗಿ ಸ್ವಲ್ಪ ಹೊತ್ತಿನ ಮೇಲೆ ಹಿಂದಿರುಗಿದಾಗ ಅವನ ಸಂಗಡ ಕೆಲವು ಮಂದಿ ಸೇವಕರಿದ್ದರು. "ನಾವು ಒಳಗೆ ಹೋಗೋಣ ಬನ್ನಿ. ಕಾರು ಮತ್ತು ಅದರಲ್ಲಿರುವ ದೇಹದ ವಿಚಾರ ಇವರು ನೋಡಿಕೊಳ್ಳುವರು" ಎಂದು ಹೇಳಿ ಅವನು ರಮಾನಂದ್, ಕಾಮೇಶ್ ಮತ್ತು ಪ್ರಮೀಳೆಯನ್ನು ಕರೆದುಕೊಂಡು ಬಂಗಲೆಯ ಒಳಗೆ ಹೋದನು. ಆಗತಾನೆ ಉದಯೋನ್ಮುಖನಾದ ಸೂರ್ಯದೇವನ ಅರುಣಕಿರಣಗಳಿಂದ ಪೂರ್ವದಿಕ್ಕು ಕಾಂತಿಮಯವಾಗುತ್ತಿತ್ತು.

ಅದೇ ದಿನ ಪೂರ್ವಾಹ್ನ ಒಂಭತ್ತು ಗಂಟೆ ಸುಮಾರಲ್ಲಿ ಕಾಮೇಶ್, ರಮಾನಂದ್ ಮತ್ತು ಪ್ರಮೀಳಾ ಸ್ನಾನಾದಿಗಳನ್ನು ಮುಗಿಸಿಕೊಂಡು ಬಂಗಲೆಯ ಸುಸಜ್ಜಿತವಾದ ದಿವಾನ್‌ಖಾನೆಯಲ್ಲಿ ಉಪಹಾರಕ್ಕೆ ಕುಳಿತಾಗ ಕಿಷನ್‌ಚಂದನು ತನ್ನ ಮಿತ್ರನ ಪರಿಚಯ ಮಾಡಿಸಿ,

"ಇವರು ಡುಂಗರ್‌ಪುರದ ರಾಜಸಾಹೇಬರು. ಕೆಲವು ದಿನಗಳು ನಮಗೆ ಆಶ್ರಯಕೊಡಲು ಒಪ್ಪಿಕೊಂಡಿರುತ್ತಾರೆ." ಎಂದನು.

"ಕಿಷನ್‌ಚಂದ್ ನಾನೂ ಬಾಲ್ಯಸ್ನೇಹಿತರು. ಈ ನನ್ನ ನಿವಾಸ, ಸೇವಕರು ನಿಮ್ಮದೆಂದೇ ಭಾವಿಸಿಕೊಳ್ಳಿ" ಎಂದು ರಾಜಾಸಾಹೇಬನು ಆದರದಿಂದ ನುಡಿದನು.

ಉಪಹಾರ ಮುಗಿದು ಕಿಷನ್‌ಚಂದ್ ಒಬ್ಬನೇ ಇದ್ದಾಗ "ಈಗ ನಮ್ಮ ಮುಂದಿನ ಕಾರ್ಯಕ್ರಮವೇನು ?" ಎಂದು ರಮಾನಂದ್ ಕೇಳಿದನು.

"ಅದು ಕಾಮೇಶ್ ಚೌಧರಿಯವರನ್ನು ಅವಲಂಬಿಸಿದೆ. ನಿನ್ನೆ ರಾತ್ರಿ ಅವರು ಸಹಾಯಕ್ಕೆ ಬಾರದೆ ಹೋಗಿದ್ದರೆ ನನ್ನ ಪ್ರಾಣಾಂತವಾಗುತ್ತಿತ್ತು. ಅವರಿಗೆ ಎಲ್ಲ ವಿಚಾರಗಳನ್ನೂ ತಿಳಿಸಿದ್ದೇನೆ"

—ಕಿಷನ್‌ಚಂದ್ ಉತ್ತರ ಕೊಟ್ಟನು.

ಅಷ್ಟರಲ್ಲಿ ರಾಜಾಸಾಹೇಬನು ಆ ದಿನದ ಕೆಲವು ಪತ್ರಿಕೆಗಳನ್ನು ಕೈಯಲ್ಲಿ ಹಿಡಿದು ಒಳಗೆ ಬಂದನು. ರಮಾನಂದ್ ಅವುಗಳನ್ನು ನೋಡಿ ಆಶ್ಚರ್ಯ ದಿಂದ "ಇದೇನು ನಾನು ಓದುತ್ತಿರುವುದು!" ಎಂದನು.

"ಜುನಾಗಡ್ ಸಂಸ್ಥಾನ ಪಾಕಿಸ್ಥಾನಕ್ಕೆ ಸೇರಿತು"

ಎಂದು ಎಲ್ಲ ಪತ್ರಿಕೆಗಳೂ ದೊಡ್ಡ ಅಕ್ಷರಗಳಲ್ಲಿ ಮೇಲ್ಪಂಕ್ತಿಗಳನ್ನು ಕೊಟ್ಟಿದ್ದವು.

"ನಾವು ಬೊಂಬಾಯ್ ಬಿಟ್ಟು ರಾಜಕೋಟೆ ಸೇರುವಷ್ಟರಲ್ಲಿ ಎಷ್ಟೊಂದು ರಾಜಕೀಯ ನಡೆದಿದೆ. ಜುನಾಗಡ ಪ್ರಜೆಗಳಲ್ಲಿ ಹಿಂದೂಗಳು ಹೆಚ್ಚಾಗಿದ್ದಾರೆ. ಅದು ಪಾಕಿಸ್ಥಾನಕ್ಕೆ ಸೇರುವುದು ಹೇಗೆ ಸಾಧ್ಯ! ಇದರಲ್ಲೇನೋ ಮೋಸವಿದೆ."

ಆಂಗ್ಲ ಪತ್ರಿಕೆಯೊಂದರಲ್ಲಿ ಪ್ರಕಟವಾಗಿದ್ದ ಸುದ್ದಿಯ ವಿವರಗಳನ್ನು ಓದಿ ರಮಾನಂದ್ ಅಭಿಪ್ರಾಯ ಪಟ್ಟನು.

"ಈಗೊಂದು ವಾರದಿಂದ ನಾವಿದನ್ನು ನಿರೀಕ್ಷಿಸುತ್ತಿದ್ದೆವು. ಜುನಾಗಡ್ ನವಾಬನು ತನ್ನನಾಯಿಗಳು ಮತ್ತು ನರ್ತಕಿಯರೊಡನೆ ಕರಾಚಿಗೆ ಹೋದಾಗಲೇ ಹೀಗಾಗುವುದೆಂದು ತಿಳಿದಿತ್ತು."

ಎಂದು ಹೇಳಿ ರಾಜಾಸಾಹೇಬನು ಜುನಾಗಡ ನವಾಬನ ವಿಚಾರದಲ್ಲಿ ಪತ್ರಿಕೆಗಳಲ್ಲಿ ಪ್ರಕಟವಾಗದೆ ಜನಜನಿತವಾಗಿದ್ದ ಕೆಲವು ಸ್ವಾರಸ್ಯ ಪ್ರಸಂಗ ಗಳನ್ನು ಸಾಲಂಕಾರವಾಗಿ ವಿವರಿಸಿದನು. ಅವುಗಳಲ್ಲಿ ಒಂದನ್ನು ಮಾತ್ರ ನಾವು ಸಂಕ್ಷೇಪವಾಗಿ ಉಲ್ಲೇಖಿಸುವೆವು. ನವಾಬನಿಗೆ ನಾಯಿಗಳೆಂದರೆ ಪಂಚಪ್ರಾಣ. ನಾಯಿಗಳಿಗಾಗಿಯೇ ಅರಮನೆಯ ಒಂದು ಭಾಗ ಪ್ರತ್ಯೇಕಿಸಲ್ಪಟ್ಟಿತ್ತು. ಅನೇಕ ಮಂದಿ ಸೇವಕ ಸೇವಕಿಯರಿದ್ದರು. ಅರಮನೆಯ ಆ ಭಾಗಕ್ಕೆ ಜನರು "ನಾಯಿಗಳ ಸ್ವರ್ಗ" ಎಂದು ನಾಮಕರಣಮಾಡಿದ್ದರು. ಹಿಂದೊಂದು ಸಾರಿ

ಎರಡು ಕುಲೀನ ವಂಶದ ನಾಯಿಗಳಿಗೆ ಮದುವೆಯನ್ನೇರ್ಪಡಿಸಿ ತನ್ನ ಸಾಮಂತ ಸರದಾರರಿಗೆ ನವಾಬನು ಆಹ್ವಾನ ಕಳಿಸಿದ್ದನು. ಸಂಗೀತ, ನರ್ತನ ನಜರೆ, ಮುಜರೆ, ಭೋಜನಗಳೊಡನೆ ಮಹೋತ್ಸವ ವಿಜೃಂಭಣೆಯಿಂದ ನಡೆಯಿತು ಇತ್ಯಾದಿ ಇತ್ಯಾದಿ.

ಈ ಮಾತುಗಳು ನಡೆಯುತ್ತಿದ್ದಾಗ ಕಾಮೇಶ್‌ಚೌದುರಿ ಮತ್ತು ಕಿಷನ್ ಚಂದರು ಪ್ರತ್ಯೇಕವಾಗಿ ಸಣ್ಣ ದನಿಯಿಂದ ಏನೋ ಮಾತಾಡಿಕೊಳ್ಳುತ್ತಿದ್ದರು. ಕೊನೆಗೆ ಕಾಮೇಶ್ ಹೇಳಿದನು.

"ಈ ರಾಜಕೀಯ ಪರಿಸ್ಥಿತಿ ಕಿಷನ್‌ಚಂದರ ಸಮಸ್ಯೆಗಳನ್ನು ಮತ್ತಷ್ಟು ಕಠಿಣವಾಗಿ ಮಾಡಿದೆ. ನವಾಬ್ ಜಾದಾ ಕಿಷನ್‌ಚಂದರನ್ನು ಸೆರೆಯಟ್ಟಿದ್ದ ವನದುರ್ಗ ಜುನಾಗಡ್ ಸಂಸ್ಥಾನಕ್ಕೆ ಸೇರಿದ ಪ್ರದೇಶ. ನಿನ್ನೆ ನಾನು ಅವರನ್ನು ಬಿಡುಗಡೆಮಾಡಿ ಇಲ್ಲಿಗೆ ಕರೆದುಕೊಂಡು ಬಾರದಿದ್ದ ಪಕ್ಷದಲ್ಲಿ ಅವರನ್ನು ಉಳಿಸುವುದೇ ಕಷ್ಟವಾಗುತ್ತಿತ್ತು. ಈಗ ಅವರ ಮಗಳು ಚಂದ್ರಲೇಖಾ ಕಷ್ಟದಲ್ಲಿ ಸಿಕ್ಕಿದ್ದಾಳೆ."

ರಾಜಕೋಟೆಗೆ ಬಂದಮೇಲೆ ನಡೆದ ವಿಚಿತ್ರ ಘಟನೆಗಳ ಆವೇಶದಲ್ಲಿ ಪ್ರಮೀಳಾ ಮತ್ತು ರಮಾನಂದ್ ಕಿಷನ್‌ಚಂದನ ಮಗಳ ವಿಚಾರವನ್ನೇ ಮರೆತಿದ್ದರು. ಅವಳು ಡಿಲ್ಲಿಯಲ್ಲಿ ಸುರಕ್ಷಿತವಾಗಿರುವಳೆಂಬ ಭಾವನೆಯೂ ಇದರ ಕಾರಣವಾಗಿತ್ತು.

"ಚಂದ್ರಲೇಖಾ ಡಿಲ್ಲಿಯಲ್ಲಿರಬೇಕಲ್ಲವೇ? ನನ್ನ ಸಂಗಡ ಟೆಲಿಫೋನಿನಲ್ಲಿ ಮಾತಾಡಿದವರಾರು?"

ಎಂದಳು ಪ್ರಮೀಳಾ.

"ನಾನು ಭಾವಿಸಿದಂತೆ ಅವಳೊಬ್ಬ ವಂಚಕಿ. ಮೋಸದಿಂದ ರತ್ನಹಾರವನ್ನು ಅಪಹರಿಸಲು ಪಾಕಿಸ್ಥಾನದಿಂದ ಕಳ್ಳರ ಗುಂಪೊಂದು ಶರಣಾರ್ಥಿಗಳಂತೆ ಭಾರತವನ್ನು ಪ್ರವೇಶಿಸಿ ಆ ಪ್ರಯತ್ನಗಳನ್ನು ಮಾಡಿದೆ. ಗುಲಾಬ್‌ಸಿಂಗನೆಂದು ನಟಿಸಿದ ವ್ಯಕ್ತಿಯೇ ಬೊಂಬಾಯಿಯಲ್ಲಿ ದಾದೂವಿನ ಕೊಲೆಗೆ ಕಾರಣನೆಂಬುದು ಈಗ ಸ್ಪಷ್ಟವಾಗಿದೆ."

ಕಾಮೇಶ್ ನುಡಿದನು.

" ಈಗ ಚಂದ್ರಲೇಖಾ ಎಲ್ಲಿದ್ದಾಳೆ ?"

" ರಾತ್ರಿ ನಾವು ಕಾರಲ್ಲಿ ಬರುತ್ತಿದ್ದಾಗ ಕಿಷನ್‌ಚಂದರು ಒಂದೆರಡು ಮಾತುಗಳಲ್ಲಿ ನನಗೆ ಆ ವಿವರಗಳನ್ನು ತಿಳಿಸಿದರು. ಈಗ ದಯಮಾಡಿ ಅವರು ವನದುರ್ಗದಿಂದ ಬಿಡುಗಡೆಯಾಗುವವರೆಗೆ ಏನು ನಡೆಯಿತೆಂಬುದನ್ನು ತಿಳಿಸಿದರೆ ಮುಂದಿನ ಕಾರ್ಯಕ್ರಮವನ್ನು ನಾವು ನಿರ್ಧರಿಸಿಕೊಳ್ಳಬಹುದು."

ಕಾಮೇಶನ ಸಲಹೆ ಸೂಕ್ತವಾಗಿ ಕಂಡಿತು. ಗಂಟಲು ಸರಿಪಡಿಸಿಕೊಂಡು ಕಿಷನ್‌ಚಂದ್ ತನ್ನ ಕಥೆಯನ್ನು ಪ್ರಾರಂಭಿಸಿದನು.

" ಬೊಂಬಾಯಲ್ಲಿ ನಾನು ರಮಾನಂದರನ್ನು ನೋಡಿ ರತ್ನಹಾರದ ರಕ್ಷಣೆಗೆ ಏರ್ಪಡಿಸಿ ಕರಾಚಿಗೆ ಹಿಂದಿರುಗಿದೆನೋ ಇಲ್ಲವೋ ನನ್ನ ದುರಾದೃಷ್ಟಕ್ಕೆ ಪ್ರಾರಂಭವಾಯಿತು. ಆಗ ನಾನು ಎರಡು ರತ್ನಹಾರಗಳನ್ನು ತೋರಿಸಿದ್ದು ರಮಾನಂದ್ ಮತ್ತು ಪ್ರಮೀಳಾದೇವಿ ಇಬ್ಬರಿಗೂ ನೆನಪಿರಬಹುದು. ಅವುಗಳಲ್ಲಿ ಒಂದು ವಾಸ್ತವ ಮತ್ತೊಂದು ಕೃತಕ ಎಂದು ಹೇಳಿ ವಾಸ್ತವ ಹಾರವನ್ನು ರಮಾನಂದರ ರಕ್ಷಣೆಗೆ ಕೊಟ್ಟೆ. ಆಗ ನಾನು ಮಾಡಿದ ಅಪರಾಧವೇ ಆ ಮೇಲಿನ ನನ್ನ ಎಲ್ಲ ಕಷ್ಟಗಳಿಗೆ ಕಾರಣವಾಯಿತು."

ಎಂದು ಹೇಳಿ ಕಿಷನ್‌ಚಂದನು ದೈನ್ಯದೃಷ್ಟಿಯಿಂದ ರಮಾನಂದನ ಕಡೆ ನೋಡಿ ಕ್ಷಣಕಾಲ ಸುಮ್ಮನಿದ್ದನು.

" ಆಗಿನ ವಿಷಮ ಪರಿಸ್ಥಿತಿಯಲ್ಲಿ ನಿಮ್ಮಿಂದ ಅಪರಾಧವಾಗಿದ್ದರೆ ಅದೇನೂ ಆಶ್ಚರ್ಯವಲ್ಲ, ಕಿಷನ್‌ಚಂದರೇ. ನೀವು ಸಂಕೋಚವಿಲ್ಲದೆ ಎಲ್ಲವನ್ನೂ ಹೇಳಬಹುದು. ಅಪರಾಧವೇನೆಂಬುದನ್ನು ತಿಳಿಯುವ ಮೊದಲೇ ನಾನು ನಿಮ್ಮನ್ನು ಕ್ಷಮಿಸುತ್ತೇನೆ."

ರಮಾನಂದನ ಅನುನಯದ ಕಂಠದಿಂದ ಸಮಾಧಾನಗೊಂಡು ಕಿಷನ್‌ಚಂದ್ ಮುಂದುವರಿಸಿದನು.

" ಆಗ ನನ್ನಲ್ಲಿದ್ದ ಎರಡು ರತ್ನಹಾರಗಳೂ ಕೃತಕ ಹಾರಗಳೇ. ವಾಸ್ತವವಾದ ಹಾರ ಕರಾಚಿಯಲ್ಲಿ ನನ್ನ ಮನೆಯಲ್ಲೇ ಉಳಿದಿತ್ತು. ರತ್ನಹಾರವನ್ನು

ಸಾಧ್ಯವಿದ್ದರೆ ಕೊಂಡುಕೊಳ್ಳಲು ಇಲ್ಲವೇ ಅಪಹರಿಸಲು ಅಪೇಕ್ಷಿಸಿದ್ದ ಜಮೀನ್ದಾರ ಸುಲ್ತಾನನ ಸಲಹೆಯಂತೆ ಕರಾಚಿಯ ಪೋಲೀಸರು ಮತ್ತು ಗೂಂಡಾಗಳ ಒಂದು ತಂಡ ನನ್ನ ಮೇಲೆ ಸರ್ಪಕಾವಲಿದ್ದುದರಿಂದ ನಾನು ಅದನ್ನು ಕರಾಚಿಯಿಂದ ಹೊರಗೆ ತರುವುದು ಸಾಧ್ಯವಾಗಿರಲಿಲ್ಲ. ಆಗಿನ ಸಂದರ್ಭದಲ್ಲಿ ಏನು ಮಾಡಬೇಕೆಂದು ತೋಚದೆ ನಾನು ಬೊಂಬಾಯಿನ ನನ್ನ ಸರಾಫ್ ಮಿತ್ರನೊಬ್ಬನ ಸಹಾಯದಿಂದ ಎರಡು ಕೃತಕ ಹಾರಗಳನ್ನು ತಯಾರಿಸಿದೆ. ಅವುಗಳಲ್ಲಿ ಒಂದನ್ನು ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಪ್ರದರ್ಶಿಸಲು ಏರ್ಪಡಿಸಿದೆ. ಅದು ವಾಪಸ್ ಬಂದಮೇಲೆ ಒಂದನ್ನು ರಮಾನಂದರ ವಶಕ್ಕೆ ಕೊಟ್ಟು ಮತ್ತೊಂದು ಹಾರವನ್ನು ತೆಗೆದುಕೊಂಡು ಕರಾಚಿಗೆ ಹಿಂದಿರುಗಿದೆ. ಈ ನಾಟಕ ಹೂಡುವುದರಲ್ಲಿ ನನ್ನ ಉದ್ದೇಶ ಸುಲ್ತಾನನ್ನು ವಂಚಿಸುವುದು. ಆದರೆ ಅದು ಸಫಲವಾಗಲಿಲ್ಲ. ನಾನು ಹೋಗುವುದರಲ್ಲಿ ಸುಲ್ತಾನನ ಕಡೆಯವರು ನನ್ನ ಮನೆಯನ್ನು ಲೂಟಿಮಾಡಿ ರತ್ನಹಾರವನ್ನು ಅಪಹರಿಸಿದ್ದರು. ನನ್ನ ಗೈರ್‌ಹಾಜರಿಯಲ್ಲಿ ಚಂದ್ರಲೇಖಾ ಬಂಧುಗಳೊಬ್ಬರ ಮನೆಯಲ್ಲಿ ಆಶ್ರಯ ಪಡೆದದ್ದರಿಂದ ಉಳಿದುಕೊಂಡಳು. ದರೋಡೆಕೋರರೊಡನೆ ನಡೆದ ಹೋರಾಟದಲ್ಲಿ ನನ್ನ ಕಡೆಯವರಿಬ್ಬರು ಹತರಾಗಿದ್ದರು. ಕೆಲವರಿಗೆ ಗಾಯಗಳಾಗಿತ್ತು. ಪೋಲೀಸರು ದೊಂಬಿ ಕೇಸ್ ರಿಜಿಸ್ಟರ್ ಮಾಡಿಕೊಂಡಿದ್ದರು. ರತ್ನಹಾರ ಕಳುವಾಗಿದೆಯೆಂದು ತಿಳಿಸಲು ನನಗೆ ಧೈರ್ಯವಾಗಲಿಲ್ಲ. ತಿಳಿಸಿದ್ದರೂ ಆಗಿನ ಸ್ಥಿತಿಯಲ್ಲಿ ಪೋಲೀಸರು ನನ್ನ ಸಹಾಯಕ್ಕೆ ಬರವಂತಿರಲಿಲ್ಲ. ಪ್ರತಿದಿನ ನಗರದಲ್ಲಿ ಮುಸ್ಲಿಂಲೀಗ್ ಅನುಯಾಯಿಗಳ ಗಲಭೆ. ಶಾಂತಿ ರಕ್ಷಿಸುವುದೇ ಪೋಲೀಸರಿಗೆ ಕಷ್ಟವಾಗಿತ್ತು. ಕೆಲವು ದಿನಗಳು ಸುಮ್ಮನಿದ್ದು ಕೊನೆಗೆ ನಾನೇ ಸುಲ್ತಾನನನ್ನು ನೋಡಿ ರತ್ನಹಾರ ತಂದಿರುವುದಾಗಿ ತಿಳಿಸಿದೆ. ನನ್ನಲ್ಲಿದ್ದ ಕೃತಕ ಹಾರವನ್ನೂ ತೋರಿಸಿದೆ. ಅದನ್ನು ನೋಡಿದಾಗ ಸುಲ್ತಾನನಿಗೆ ಸಂದೇಹಕ್ಕಿಟ್ಟುಕೊಂಡಿತು. ತನಗೆ ಪರಿಚಿತರಾದ ಸರಾಫರನ್ನು ಕರೆಸಿ ಬೆಲೆ ಕಟ್ಟಿಸಿದನು. ಸರಾಫರೂ ಮೋಸ ಹೋಗಿ ಕೃತಕಹಾರವನ್ನು ನಿಜವಾದ ಹಾರವೆಂದೇ ತಿಳಿದು ಹತ್ತುಲಕ್ಷ ರೂಪಾಯಿ ಬೆಲೆ ಕಟ್ಟಿದರು. ಸುಲ್ತಾನನು ಚೌಕಾಯಿಸಿಮಾಡಿ ಎಂಟು ಲಕ್ಷ ರೂಪಾಯಿ ಬೆಲೆ ಗೊತ್ತುಮಾಡಿ ತನ್ನ ಪತ್ನಿ ಒಪ್ಪಿದರೆ ಕೊಂಡುಕೊಳ್ಳುವುದಾಗಿ ತಿಳಿಸಿದನು. ಹಾರ ಆ ದಿನ ತನ್ನ ಹತ್ತಿರಲೇ ಇರಬೇಕೆಂದೂ ಮಾರನೆಯ ದಿನ ಹನ್ನೊಂದು ಗಂಟೆಗೆ ಬಂದರೆ ಕರೀದಿ ಹಣ

ಕೊಡುವುದಾಗಿಯೂ ಹೇಳಿದನು. ನಾನು ಒಪ್ಪಿಕೊಂಡೆ. ಮಾರನೆಯ ದಿನ ಸುಲ್ತಾನನು ಹೆಂಗಸರಿಗೆ ಒಪ್ಪಿಗೆಯಾಗಲಿಲ್ಲವೆಂದು ಹೇಳಿ ಹಾರ ಹಿಂದಿರುಗಿ ಕೊಟ್ಟನು. ಹಾರ ಬದಲಾವಣೆಯಾಗಿದೆಯೆಂದೂ, ಕೃತಕ ಹಾರದ ಬದಲಿಗೆ ನಿಜವಾದ ಹಾರವನ್ನು ಸುಲ್ತಾನನು ಕೊಡುತ್ತಿರುವನೆಂದೂ ನನಗೆ ಕೂಡಲೆ ತಿಳಿಯಿತು. ಆದರೂ ನಿರಾಶೆಗೊಂಡವನಂತೆ ಅಭಿನಯಿಸಿ "ನಿಮ್ಮಂತಹ ಶ್ರೀಮಂತ ಸರದಾರರೇ ಬೇಡವೆಂದಮೇಲೆ ಹಾರವನ್ನಿಟ್ಟುಕೊಂಡು ಏನು ಮಾಡುವುದು? ಬೊಂಬಾಯಿಗೆ ತೆಗೆದುಕೊಂಡು ಹೋಗಿ ಹರಳುಗಳನ್ನು ಬೇರೆ ತೆಗೆದು ಮಾರಿಬಿಡುತ್ತೇನೆ" ಎಂದು ಹೇಳಿ ಹಿಂತಿರುಗಿದೆ.

"ಇದಾದ ಒಂದು ವಾರಕ್ಕೆ ನಾನು ಕರಾಚಿ ಬಿಟ್ಟದ್ದು. ಒಬ್ಬ ಮುಸಲ್ಮಾನ್ ಸದ್ಗೃಹಸ್ತನ ಸಹಾಯದಿಂದ ವಾಣಿಜ್ಯನೌಕೆಯೊಂದನ್ನು ಗೊತ್ತು ಮಾಡಿಕೊಂಡು ಪೋರ್‌ಬಂದರ್ ಮಾರ್ಗವಾಗಿ ನಾನೂ, ನನ್ನ ಮಗಳೂ ರಾಜಕೋಟೆ ತಲುಪಿದೆವು. ಕೆಲವು ದಿನಗಳು ಅಲ್ಲಿ ವಿಶ್ರಮಿಸಿಕೊಂಡು ಆಮೇಲೆ ಬೊಂಬಾಯಿಗೆ ಹೋಗುವುದು ನನ್ನ ಉದ್ದೇಶವಾಗಿತ್ತು. ಆದರೆ ನಾನು ಅಲ್ಲಿಗೆ ಬಂದ ಮಾರನೆ ದಿನವೇ ನನ್ನ ಮಗಳು ಚಂದ್ರಲೇಖಾ ಅಪಹೃತಳಾದ್ದರಿಂದ ನಾನು ದಿಕ್ಕುತೋರದೆ ಸುಮ್ಮನೆ ಕುಳಿತುಬಿಟ್ಟೆ"

ಇಷ್ಟು ಹೇಳಿ ಕಿಷನ್‌ಚಂದ್ ಚಿಂತಿಸುತ್ತ ಸುಮ್ಮನಿದ್ದನು. ಮಗಳ ಅಪಹಾರದ ವಿವರಗಳನ್ನು ಸ್ಮರಿಸಿಕೊಂಡು ಅವನ ಕಣ್ಣುಗಳು ಅಶ್ರುಸಿಕ್ತವಾದವು. "ನೀವು ಇಲ್ಲಿಗೆ ಬಂದ ಕೂಡಲೆ ನನಗೆ ಸುದ್ಧಿ ಕಳುಹಿಸಿದ್ದರೆ ಚೆನ್ನಾಗಿತ್ತು. ನೀವೇಕೆ ಹಾಗೆ ಮಾಡಲಿಲ್ಲ?" ರಮಾನಂದ್ ಕೇಳಿದನು.

ಕಿಷನ್‌ಚಂದ್ ನಿಟ್ಟುಸಿರಿಟ್ಟು ಹೇಳಿದನು. "ನಿಮಗೆ ಸುದ್ದಿ ಕಳುಹಿಸದಿರಲು ಒಂದು ಮುಖ್ಯ ಕಾರಣವಿತ್ತು. ಹೆಸರು ಬದಲಾಯಿಸಿಕೊಂಡು ನಾವು ಪ್ರಯಾಣಮಾಡುತ್ತಿದ್ದೆವು. ನಾವು ರಾಜಕೋಟೆಗೆ ಬಂದಿರುವ ವಿಚಾರ ನನ್ನ ಪರಿಚಿತರಿಗಾಗಲಿ, ಮಿತ್ರರಿಗಾಗಲಿ ತಿಳಿಯದಿರಲೆಂದು ನಾನು ಯೋಚಿಸಿದೆನು. ಅದೇ ನನ್ನ ತಪ್ಪೆಂದು ಈಗ ಅರಿವಾಗುತ್ತಿದೆ".

"ಚಂದ್ರಲೇಖಾ ಅಪಹೃತಳಾದುದ್ದು ಹೇಗೆ?"

ಕಾಮೇಶ್ ಪ್ರಶ್ನಿಸಿದನು.

"ಆ ಘಟನೆ ನೆನಸಿಕೊಂಡರೆ ನನ್ನ ಮೈ ನಡುಗುತ್ತದೆ. ನಾವು ರಾಜಕೋಟೆಗೆ ಬಂದಾಗ ನನ್ನ ಸಂಗಡ ದಾದು ಮತ್ತು ಇನ್ನೊಬ್ಬ ಸೇವಕನೂ ಇದ್ದರು. ರೈಲ್ವೆ ಸ್ಟೇಷನ್ ಸಮೀಪದ ಧರ್ಮಶಾಲೆಯಲ್ಲಿ ಎರಡು ಕೊಟಡಿಗಳನ್ನು ಬಾಡಿಗೆ ತೆಗೆದುಕೊಂಡೆವು. ಯಾವ ವಿಶೇಷವೂ ಇಲ್ಲದೆ ಒಂದೆರಡು ದಿನಗಳು ಕಳೆದವು. ಮಾರನೆಯ ದಿನ ನನ್ನ ಹೆಸರು ವಿಳಾಸಗಳಿದ್ದ ಕಾಗದವೊಂದು ಕೊಟಡಿಯಲ್ಲಿ ಸಿಕ್ಕಿತು. ಒಡೆದು ನೋಡಿ ಚಕಿತನಾದೆ.

"ನೀನು ಕರಾಚಿಯಲ್ಲಿ ಮಾಡಿದ ಮೋಸ ಪತ್ತೆಯಾಗಿದೆ. ಮೂರು ದಿನದಲ್ಲಿ ನಿಜವಾದ ರತ್ನಹಾರವನ್ನು ಸುಲ್ತಾನರಿಗೆ ತಲಪಿಸದೆ ಹೋದರೆ ನೀನೂ ನಿನ್ನ ಮಗಳೂ ಅಪಾಯಕ್ಕೀಡಾಗುವಿರಿ. ಅವಧಿಯೊಳಗಾಗಿ ಸುಲ್ತಾನರ ಪ್ರತಿನಿಧಿ ನಿಮ್ಮನ್ನು ನೋಡುವರು. ಅವರ ಕೈಗೆ ನೀವು ರತ್ನಹಾರವನ್ನು ಕೊಡತಕ್ಕದ್ದು. ಈ ಸಂಬಂಧದಲ್ಲಿ ನೀವು ಪೋಲೀಸರ ಸಹಾಯ ಪಡೆಯಲು ಪ್ರಯತ್ನಿಸಿದರೆ ಮರಣ ಖಂಡಿತ"—ಎಂದು ಕಾಗದನಲ್ಲಿತ್ತು.

"ನಾನು ಪತ್ರವನ್ನು ಚಂದ್ರಳಿಗೆ ತೋರಿಸಲಿಲ್ಲ. ಏನು ಮಾಡಬೇಕೆಂದು ದಿನವೆಲ್ಲ ಯೋಚನೆಮಾಡಿ ಕೊನೆಗೆ ರಾತ್ರಿ ರೈಲಲ್ಲಿ ದಾದುವನ್ನು ಬೊಂಬಾಯಿಗೆ ಕಳುಹಿಸಿದೆ. ರಮಾನಂದರನ್ನ ನೋಡಿ ಅವರಿಗೆ ಇಲ್ಲಿಯ ಸಮಾಚಾರಗಳನ್ನು ತಿಳಿಸಬೇಕಾಗಿ ಹೇಳಿದೆ. ಆ ದಿನ ರಾತ್ರಿ ಭಯದಿಂದ ನನಗೆ ನಿದ್ರೆಯೇ ಇಲ್ಲ. ನನ್ನ ತಳಮಳವನ್ನು ನೋಡಿ ಚಂದ್ರಾ ಏನೇನೋ ಪ್ರಶ್ನಿಸಿದಳು. ನಾನು ಸರಿಯಾಗಿ ಉತ್ತರ ಹೇಳಲಿಲ್ಲ. ಕೊನೆಗೆ ಅವಳು ಅಳುತ್ತಾ ಮಲಗಿಬಿಟ್ಟಳು. ನಾನು ರತ್ನಹಾರವಿದ್ದ ಪೆಟ್ಟಿಗೆಯನ್ನು ಹೊರಗೆ ತೆಗೆದು ಬೀಗದ ನಂಬರುಗಳನ್ನು ಬದಲಾಯಿಸಿದೆ. ಪೆಟ್ಟಿಗೆಯನ್ನು ತಲೆದಿಂಬಿನ ಕೆಳಗಿಟ್ಟುಕೊಂಡು ಮಲಗಿದೆ. ಎಚ್ಚರವಾಗಿದ್ದುಕೊಂಡು ಗಂಟೆಗಳನ್ನು ಎಣಿಸುತ್ತಿದ್ದೆ. ಬೆಳಗಿನ ಜಾಮದಲ್ಲಿ ನನಗೇ ಅರಿವಿಲ್ಲದೇ ನಿದ್ರೆ ಬಂತು. ಎಷ್ಟು ಹೊತ್ತು ನಿದ್ದೆಮಾಡಿದೆನೋ ಗೊತ್ತಿಲ್ಲ. ಎಚ್ಚರವಾದಾಗ ಬೆಳಕಾಗಿತ್ತು. ಕೊಟಡಿಯ ಬಾಗಿಲು ತೆರೆದಿತ್ತು. ಚಂದ್ರಾ ಇರಲಿಲ್ಲ. ಎದ್ದು ಹೊರಗೆ ಹೋಗಿ ನೋಡಿದೆ. ಅಲ್ಲಿಯೂ ಇಲ್ಲ. ವರಾಂಡದಲ್ಲಿ ಮಲಗಿದ್ದ ಸೇವಕನನ್ನು ವಿಚಾರಿಸಿದೆ. ಅವನಿಗೂ

ತಿಳಿದಿರಲಿಲ್ಲ. ಪುನಃ ಕೊಟಡಿಗೆ ಬಂದು ನೋಡಿದಾಗ ಚಂದ್ರಳ ಹಾಸಿಗೆಯ ಮೇಲೆ ಒಂದು ಕಾಗದ ಬಿದ್ದಿತ್ತು. ಆತುರದಿಂದ ಎತ್ತಿ ಓದಿದೆ. ಅದರಲ್ಲಿ ಈ ರೀತಿ ಬರೆದಿತ್ತು.

"ಚಂದ್ರಾ ನಮ್ಮ ವಶದಲ್ಲಿದ್ದಾಳೆ. ಸಂಜೆ ಆರು ಗಂಟೆಗೆ ಸುಖನಿವಾಸ್ ಹೋಟಲಿನ ಹಿಂಬಾಗದ ರಸ್ತೆಯಲ್ಲಿ ನೀನೊಬ್ಬನೇ ಕಾದು ನಿಂತಿದ್ದರೆ ನಮ್ಮ ಪ್ರತಿನಿಧಿ ಕಾರಲ್ಲಿ ಬರುತ್ತಾನೆ. ರತ್ನಹಾರವನ್ನು ನೀನು ಅವನಿಗೆ ಕೊಡ ತಕ್ಕದ್ದು. ಅದರಂತೆ ಮಾಡಿದರೆ ನಿನ್ನ ಮಗಳು ಸುರಕ್ಷಿತವಾಗಿ ಹಿಂದಿರುಗುತ್ತಾಳೆ."

"ಕಾಗದ ಓದಿ ನನ್ನ ಭಯ ಒಂದಕ್ಕೆ ಹತ್ತಾಗಿ ಬೆಳೆಯಿತು. ಅಗ್ನಿ ಕುಂಡದ ಮಧ್ಯೆ ನಾವು ನಿಂತಿರುವೆವೆಂದೂ, ಒಂದು ತಪ್ಪು ಹೆಜ್ಜೆಯಿಟ್ಟರೂ ಮರಣ ಖಂಡಿತವೆಂಮೂ ನಿಶ್ಚಯಮಾಡಿಕೊಂಡೆ. ಪೋಲೀಸರಿಗೆ ತಿಳಿಸುವುದ ರಿಂದ ನನ್ನ ಮಗಳ ಮೇಲಿನ ವಿಪತ್ತು ಹೆಚ್ಚುವ ಸಂಭವವಿತ್ತು. ಎಲ್ಲವನ್ನೂ ದೀರ್ಘವಾಗಿ ಯೋಚಿಸಿ ರತ್ನಹಾರವನ್ನು ಕೊಟ್ಟಮೇಲೆ ಸುಲ್ತಾನನ ಕಡೆಯ ವರು ವಂಚಿಸಬಹುದೆಂದೂ, ಕಾರಣ ನನ್ನ ಮಗಳು ಸುರಕ್ಷಿತವಾಗಿ ಹಿಂದಿರುಗಿದ ಮೇಲೇ ಅದನ್ನು ಕೊಡಬೇಕೆಂದೂ ನಿರ್ಧರಿಸಿದೆ. ಅದರಂತೆ ನನ್ನ ಸಂಗಡಿದ್ದ ನಂಬಿಕಸ್ಥನಾದ ಇನ್ನೊಬ್ಬ ಸೇವಕ, ಅವನ ಹೆಸರು ಪಹರಿ—ರತ್ನಹಾರದ ಪೆಟ್ಟಿಗೆಯನ್ನು ಅವನ ಕೈಯಲ್ಲಿ ಕೊಟ್ಟು ನನಗೋಸ್ಕರ ಮರುದಿನ ಸಂಜೆಯ ವರೆವಿಗೆ ಕಾದಿರಬೇಕೆಂದೂ, ನಾನು ಹಿಂದಿರುಗದೆ ಹೋದರೆ ರೈಲು ಹತ್ತಿ ಬೊಂಬಾಯಿಗೆ ಹೋಗಿ ರಮಾನಂದರಾಯರನ್ನು ನೋಡಬೇಕೆಂದೂ ತಿಳಿಸಿದೆ.

"ಈ ರೀತಿ ಎಲ್ಲವನ್ನೂ ಏರ್ಪಡಿಸಿ ಕಾಗದದಲ್ಲಿ ಸೂಚಿಸಿದ್ದಂತೆ ಆರು ಗಂಟೆಗೆ ಸರಿಯಾಗಿ ಸುಖ ನಿವಾಸ್ ಹೋಟಲಿನ ಹಿಂಭಾಗದ ರಸ್ತೆಗೆ ಹೋಗಿ ಕಾಯುತ್ತ ನಿಂತೆ. ಅದು ಅಷ್ಟು ಜನ ನಿಬಿಡವಾದ ರಸ್ತೆಯಲ್ಲ. ಹೋಟಲಲ್ಲಿ ಕೆಲಸ ಮಾಡುವವರ ಹೊರತಾಗಿ ಇತರರು ಆ ರಸ್ತೆಯನ್ನು ಉಪಯೋಗಿಸು ತ್ತಿರಲಿಲ್ಲವೆಂದೇ ಹೇಳಬಹುದು. ಆರುಗಂಟೆ ಹೊಡೆದು ಸ್ವಲ್ಪ ಹೊತ್ತಾದಾಗ ನಿಮಗೆ ಪರಿಚಿತರಾದ ನವಾಬಜಾದರ ಕಾರು ಅಲ್ಲಿಗೆ ಬಂದಿತು. ಸಾರಥಿಯ ಹೊರತಾಗಿ ಕಾರಲ್ಲಿ ಮತ್ತಾರೂ ಇರಲಿಲ್ಲ. ಸಾರಥಿ ಗಾಡಿಯನ್ನು ನಿಲ್ಲಿಸಿ "ಎಲ್ಲಿಗಾದರೂ ಹೋಗಬೇಕೇ ಸ್ವಾಮಿ?" ಎಂದು ಕೇಳಿದ.

"ಇಲ್ಲ. ಪರಿಚಿತರೊಬ್ಬರಿಗಾಗಿ ಕಾದಿದ್ದೇನೆ." ನಾನು ಉತ್ತರಕೊಟ್ಟೆ.

"ಅವರು ಬರುವುದಿಲ್ಲ, ಸ್ವಾಮಿ. ಅದರಿಂದಲೇ ಕಾರು ಕಳುಹಿಸಿದ್ದಾರೆ."

ಸಾರಥಿಯ ಉತ್ತರ ಕೇಳಿ ನನಗೆ ನಂಬಿಕೆಯಾಯಿತು. ಸುಲ್ತಾನನ ಕಡೆಯವನೇ ಇರಬೇಕೆಂದು.

"ನನಗಾಗಿ ಕಾರು ಕಳುಹಿಸಿರುವರೆಂದು ಹೇಗೆ ನಂಬುವುದು?" ಎಂದು ಪ್ರಶ್ನಿಸಿದೆ.

"ಆಗ ಸಾರಥಿ ಅರ್ಥಗರ್ಭಿತವಾದ ದೃಷ್ಟಿಯಿಂದ ನನ್ನ ಕಡೆ ನೋಡಿ "ನಿಮ್ಮ ಮಗಳನ್ನು ನೋಡುವ ಇಚ್ಛೆಯಿದ್ದರೆ ಕಾರಲ್ಲಿ ಬನ್ನಿ" ಎಂದು ಉತ್ತರಕೊಟ್ಟ.

ನನಗೆ ಯೋಚನೆಗಿಟ್ಟುಕೊಂಡಿತು. ಕಾರಲ್ಲಿ ಹೋಗುವುದೇ ಬಿಡುವುದೇ? ಹೋಗದೆ ಹೋದರೆ ನನ್ನ ಪುತ್ರಿಯನ್ನು ರಕ್ಷಿಸುವುದು ಹೇಗೆ? ಧೈರ್ಯಮಾಡಿ ಕಾರಲ್ಲಿ ಕುಳಿತೆ.

ಸ್ವಲ್ಪ ಹೊತ್ತಿನೊಳಗಾಗಿ ಕಾರು ನಗರದ ಪಶ್ಚಿಮ ಭಾಗದ ವಿಸ್ತರಣದಲ್ಲಿ ಪ್ರತ್ಯೇಕವಾಗಿದ್ದ ದೊಡ್ಡ ಬಂಗಲೆಯೊಂದನ್ನು ಪ್ರವೇಶಿಸಿ ಮನೆ ಮುಂದಿನ ಪೋರ್ಟಿಕೋದಲ್ಲಿ ನಿಂತಿತು.

ನವಾಬ್‌ಜಾದಾ ಕಾರ್ ಹತ್ತಿರ ಬಂದು "ಕಿಷನ್‌ಚಂದರು ನೀವೇಯೋ?" ಎಂದು ಕೇಳಿದ.

ನಾನು ಹೌದು ಎಂದು ಉತ್ತರಕೊಟ್ಟೆ. "ದಯಮಾಡಿ ಒಳಗೆ ಬನ್ನಿ" ಎಂದು ಕಾರಿನ ಬಾಗಿಲು ತೆಗೆದ. ನಾನು ನವಾಬ್‌ಜಾದನನ್ನು ನೋಡಿದ್ದು ಅದೇ ಮೊದಲ ಸಾರಿ. ಅವನ ವಿನಯ ವರ್ತನೆ, ಮನೆಯ ಸಜ್ಜು, ಮುಂತಾದವನ್ನು ನೋಡಿ ಧೈರ್ಯವುಂಟಾಯಿತು. ಕಾರಿಂದ ಇಳಿದೆ.

"ಭಯದ ಕಾರಣವೇನೂ ಇಲ್ಲ, ರಾವ್‌ಸಾಹೇಬ್. ಕರಾಚಿಯ ಜನ ತುಂಬಾ ಒರಟರು. ರಾಜಕೋಟೆ ಪಾಕಿಸ್ಥಾನಕ್ಕೆ ಸೇರಿದ್ದಲ್ಲವೆಂಬುದನ್ನು

ಮರೆತು ನಿಮ್ಮ ಸಂಗಡ ಕ್ರೌರ್ಯದಿಂದ ವರ್ತಿಸಿದ್ದಾರೆ. ನೀವು ಈವರೆಗೆ ಪೋಲೀಸರ ಸಹಾಯ ಅಪೇಕ್ಷಿಸದಿದ್ದುದು ಅವರ ಅದೃಷ್ಟ. ನೀವೇನಾದರೂ ಪೋಲೀಸಿಗೆ ರಿಪೋರ್ಟ ಮಾಡಿದ್ದರೆ ಇಷ್ಟು ಹೊತ್ತಿಗೆ ಅವರು ಲಾಕಪ್ಪಿನಲ್ಲಿರುತ್ತಿದ್ದರು."

ಎಂದು ಹೇಳುತ್ತಾ ನವಾಬ್‌ಜಾದಾ ನನ್ನನ್ನು ದಿವಾನ್‌ಖಾನೆಗೆ ಕರೆದುಕೊಂಡು ಹೋದ. ಆ ಮಾತುಗಳ ಸರಣಿಯನ್ನು ಕೇಳಿ ನನಗೆ ತುಂಬಾ ಆಶ್ಚರ್ಯವಾಯಿತು,

ದಿವಾನ್ ಖಾನೆಯಲ್ಲಿ ಆಸನದ ಮೇಲೆ ಕುಳಿತು, "ನನ್ನ ಮಗಳೆಲ್ಲಿದ್ದಾಳೆ?" ಎಂದು ಕೇಳಿದೆ.

"ನಿಮ್ಮ ಮಗಳು ಸುರಕ್ಷಿತವಾಗಿದ್ದಾಳೆ. ಪಾಪ! ಆ ಹುಡುಗಿಯನ್ನು ಅಪಹರಿಸಿದ ಸುದ್ದಿ ನನಗೆ ಈ ದಿನ ಮಧ್ಯಾಹ್ನ ತಿಳಿಯಿತು. ಕೂಡಲೆ ಅವರನ್ನು ಗದರಿಸಿ ಕನ್ಯೆಯನ್ನು ಕರೆತಂದು ನಿಮಗೆ ಒಪ್ಪಿಸಬೇಕಾಗಿ ಎಚ್ಚರಿಸಿದೆ. ನಾನು ರಾಜಕೋಟೆಯ ಗೌರವ ಮ್ಯಾಜೆಸ್ಟ್ರೇಟ್. ನನ್ನ ಮಾತಲ್ಲಿ ನಿಮಗೆ ವಿಶ್ವಾಸವಿಲ್ಲವೆ?" ಎಂದು ನವಾಬ್‌ಜಾದಾ ಉತ್ತರಕೊಟ್ಟ.

ನಾನು ಪ್ರತಿಯಾಗಿ ಏನೂ ಹೇಳದಿದ್ದುದನ್ನು ಕಂಡು ನವಾಬ್‌ಜಾದಾ ತಿರುಗಿ ಹೇಳಿದ. "ಕರಾಚಿಯಿಂದ ಸುಲ್ತಾನನ ಕಡೆಯವರು ಇಲ್ಲಿಗೆ ಬಂದಿರುವ ವಿಚಾರ ಕೂಡಾ ನನಗೆ ತಿಳಿದಿರಲಿಲ್ಲ. ನಿನ್ನೆ ಅವರ ಕಡೆಯ ಮನುಷ್ಯನೊಬ್ಬ ನನ್ನು ನೋಡಿದೆ. ಸಂದೇಹದಿಂದ ನನ್ನ ಸೇವಕನೊಬ್ಬನನ್ನು ಕಳುಹಿಸಿ ವಿಷಯ ತಿಳಿದುಕೊಂಡು ನಿಮ್ಮನ್ನು ನ್ನಾನೇ ನೋಡಿ ಈ ತೊಂದರೆ ಪರಿಹರಿಸಬೇಕೆಂದು ನಿರ್ಧರಿಸಿದೆ. ಜುನಾಗಡದಲ್ಲಿ ಸುಲ್ತಾನನ ಜಹಗೀರಿಯಿದೆ. ಇಲ್ಲಿಂದ ಸುಮಾರು ಮೂವತ್ತು ಮೈಲಿ. ನಿಮ್ಮ ಮಗಳನ್ನು ಅಪಹರಿಸಿ ಅಲ್ಲಿಯ ಅರಮನೆಯಲ್ಲಿಟ್ಟಿದ್ದಾರೆ. ನೀವು ಅಪೇಕ್ಷಿಸುವುದಾದರೆ ಈ ದಿನವೇ ನನ್ನ ಕಾರಲ್ಲಿ ಅಲ್ಲಿಗೆ ಹೋಗಿ ನಿಮ್ಮ ಮಗಳನ್ನು ಕರೆದುಕೊಂಡು ಒಂದೆರಡು ಗಂಟೆಗಳಲ್ಲಿ ಹಿಂದಿರುಗಬಹುದು."

"ಮೊದಲು ಪೋಲೀಸರಿಗೆ ಸುದ್ದಿ ಕೊಟ್ಟು ಆ ಮೇಲೆ ನಿಮ್ಮ ಸಂಗಡ ಬರುತ್ತೇನೆ."—ಎಂದು ನಾನು ಹೇಳಿದೆ.

"ಈ ಪ್ರಸಂಗ ಪೋಲೀಸಿಗೆ ತಿಳಿಯದೆ ತೀರ್ಮಾನವಾಗಬೇಕೆಂದು ನನ್ನ ಇಚ್ಛೆ. ಸುಲ್ತಾನನು ಕೆಟ್ಟವನೆಂದು ನಾನು ಒಪ್ಪಿಕೊಳ್ಳುತ್ತೇನೆ. ಆದರೇನು ಮಾಡುವುದು? ನನಗವನು ದೂರದ ಸಂಬಂಧ. ನಾಳೆ ಪೋಲೀಸರು ಅವನನ್ನು ದಸ್ತಗಿರಿ ಮಾಡಿದರೆ ಇಷ್ಟವಿಲ್ಲದಿದ್ದರೂ ನಾನೇ ಅವನ ಸಹಾಯಕ್ಕೆ ಹೋಗಬೇಕಾಗುತ್ತದೆ. ಆದ್ದರಿಂದಲೆ ನಿಮ್ಮ ಮಗಳನ್ನು ನಿಮಗೊಪ್ಪಿಸಿ, ಸುಲ್ತಾನನು ನಿಮ್ಮ ಕ್ಷಮೆ ಕೇಳುವಂತೆ ಮಾಡಿ ಸಾಧ್ಯವಾದಷ್ಟು ಬೇಗ ಅವರನ್ನು ಕರಾಚಿಗೆ ಕಳುಹಿಸಿಬಿಡಲು ನಿಶ್ಚೈಸಿದ್ದೇನೆ."

ಯೋಚಿಸಿ ಕೊನೆಗೆ ಹೇಳಿದೆ—"ನಿಮ್ಮ ಇಷ್ಟದಂತಾಗಬಹುದು" ಎಂದು. ನವಾಬ್ ಜಾದಾ ರತ್ನಹಾರದ ವಿಚಾರವೆತ್ತಲಿಲ್ಲ. ನಾನೂ ಪ್ರಸ್ತಾಪ ಮಾಡಲಿಲ್ಲ. ಭಾರತದ ವಿಭಜನಾನಂತರ ಪಾಕಿಸ್ಥಾನಿಗಳು ಗಡಿದಾಟಿ ಭಾರತಕ್ಕೆ ಬಂದು ಇಂತಹ ಅಕೃತ್ಯಗಳನ್ನು ನಡೆಸುತ್ತಿದ್ದರೆಂದು ನನಗೆ ತಿಳಿದಿತ್ತು. ಪಂಜಾಬ್, ರಾಜಸ್ಥಾನ್ ಮತ್ತು ಸೌರಾಷ್ಟ್ರದ ಗಡಿಗಳಲ್ಲಿ ಇಂತಹ ಅಕೃತ್ಯಗಳು ಆಗಾಗ್ಗೆ ನಡೆಯುತ್ತಿದ್ದವು. ಭಾರತದ ಪ್ರಜೆಯಾದ ನವಾಬ್ ಜಾದ ಮುಸಲ್ಮಾನನಾದರೂ ಈ ಅಕೃತ್ಯಗಳನ್ನು ಖಂಡಿಸಿ ಅದಕ್ಕಾಗಿ ಪಾಕಿಸ್ಥಾನಿಗಳನ್ನು ದೂರುವುದೂ, ಸ್ವಮತೀಯರಾದ್ದರಿಂದ ಅವರನ್ನು ಪೋಲೀಸರಿಂದ ರಕ್ಷಿಸಲು ಪ್ರಯತ್ನಿಸುವುದೂ ಸಹಜವೆಂದು ಭಾವಿಸಿದೆ.

"ಕಾರು ಹೊರಗೆ ಸಿದ್ಧವಾಗಿತ್ತು. ಅಷ್ಟು ಹೊತ್ತಿಗೆ ಕತ್ತಲಾಗಿದ್ದರೂ ಮಗಳನ್ನು ನೋಡುವ ಕಾತರದಿಂದ ಕೂಡಲೆ ಹೋಗೋಣವೆಂದೆ. ನಾನೂ ನವಾಬ್ ಜಾದಾ ಕಾರಲ್ಲಿ ಕುಳಿತು ರಾಜಕೋಟೆಯಿಂದ ಹೋದೆವು. ಸುಮಾರು ಅರ್ಧ ಗಂಟೆ ಪ್ರಯಾಣ ಮಾಡಿದ ಮೇಲೆ ಮುಸಲ್ಮಾನರ ಒಂದು ದೊಡ್ಡ ಗುಂಪು ದಾರಿಗೆ ಅಡ್ಡವಾಗಿ ನಿಂತಿದ್ದುದು ಕಂಡಿತು. "ಪಾಕಿಸ್ಥಾನ್ ಜಿಂದಾಬಾದ್!" ಎಂಬ ಅವರು ಜಯಘೋಷ ಮಾಡುತ್ತಿದ್ದರು. ಸಾರಥಿ ಗಾಡಿ ನಿಲ್ಲಿಸಿದನು. ಜನರು ನವಾಬ್ ಜಾದನನ್ನು ನೋಡುತ್ತಲೆ "ನವಾಜ್ ಜಾದಾ ಜಿಂದಾಬಾದ್! ಜುನಾಗಡ್ ಜಿಂದಾಬಾದ್:" ಎಂದು ಕೂಗಿದರು. ಗುಂಪಿನ ನಾಯಕನು ಒಳಗೆ ಕುಳಿತಿದ್ದ ನನ್ನನ್ನು ನೋಡಿ "ಈ ಮುದುಕ ಯಾರು? ಹಿಂದುವಂತೆ ಕಾಣುತ್ತದೆ?" ಎಂದು ನವಾಬ್ ಜಾದನನ್ನು ಕೇಳಿದ.

"ಇವರು ನಮ್ಮ ಅತಿಥಿ. ಸುಮ್ಮನೆ ಹೊರಟು ಹೋಗಿ" ಎಂದು

ನವಾಬನು ಗದ್ದಿಸಿ ಹೇಳಿದಾಗ ಗುಂಪು ಚದುರಿತು. ನವಾಬನು ನನ್ನ ಕಡೆ ತಿರುಗಿ "ಹುಚ್ಚು ಜನ! ಏನೋ ಚಲುವಳಿ ನಡೆಸುತ್ತಿರುವಂತಿದೆ. ಈ ರಾತ್ರಿ ಮುಂದೆ ಹೋಗುವುದು ಅಪಾಯ. ಸಮೀಪದಲ್ಲಿ ಒಂದು ಸುರಕ್ಷಿತವಾದ ಸ್ಥಳವಿದೆ. ಅಲ್ಲಿ ರಾತ್ರಿ ಕಳೆದು ಬೆಳಿಗ್ಗೆ ಹೋಗೋಣ" ಎಂದು ಹೇಳಿದ.

"ರಾಜಕೋಟೆಗೆ ಏಕೆ ಹಿಂದಿರುಗಬಾರದು?" ನಾನು ಪ್ರಶ್ನಿಸಿದೆ.

"ದಾರಿಯಲ್ಲಿ ಅಪಾಯವೆಂಬುದನ್ನು ನೀವೇ ನೋಡಿದಿರಿ. ಸುತ್ತು ಮುತ್ತಿನ ಗ್ರಾಮಗಳಲ್ಲಿ ಮುಸಲ್ಮಾನರ ಸಂಖ್ಯೆ ಹೆಚ್ಚು. ರಾತ್ರಿ ಗಲಾಟೆ ನಡೆಯುವುದು ಖಂಡಿತ. ಒಂದು ಸಾರಿ ನಿಮ್ಮನ್ನು ರಕ್ಷಿಸಿದೆ. ಪುನಃ ಅಪಾಯಕ್ಕೆ ತಳ್ಳಲೆ?"

ನಾನು ನಿರುತ್ತರನಾದೆ. ಕಾರು ಪಾರ್ಶ್ವದ ರಸ್ತೆಗೆ ತಿರುಗಿ ಸ್ವಲ್ಪ ಹೊತ್ತಿನೊಳಗಾಗಿ ವನದುರ್ಗದ ಹತ್ತಿರ ನಿಂತಿತು. ನವಾಬ್‌ಜಾದಾ ಅಲ್ಲಿದ್ದ ಸೇವಕನಿಗೆ ನನ್ನನ್ನು ಮೇಲಿನ ಕೊಟಡಿಗೆ ಕರೆದುಕೊಂಡು ಹೋಗುವಂತೆ ಹೇಳಿ ಪುನಃ ಹೊರಗೆ ಹೋದ. ಸೇವಕನು ನನ್ನನ್ನು ಮಹಡಿಯ ಮೇಲಿನ ಕೊಟಡಿಯೊಂದರಲ್ಲಿ ವಿಶ್ರಮಿಸಿಕೊಳ್ಳುವಂತೆ ಹೇಳಿ ಹೊರಗಿನ ಚಿಲಕ ಹಾಕಿದಾಗ ನಾನು ಪುನಃ ಅಪಾಯದಲ್ಲಿ ಬಿದ್ದೆನೆಂದು ತಿಳಿದುಕೊಂಡೆ. ರಾತ್ರಿಯೆಲ್ಲ ಎಚ್ಚರವಾಗಿ ಕೊಟಡಿಯಲ್ಲಿ ಕಳೆದೆ. ಹೊರಗೆ ಜನರ "ಪಾಕಿಸ್ಥಾನ್ ಜಿಂದಾಬಾದ್!" ಎಂಬ ಜಯಘೋಷ ಒಂದೆರಡು ಸಾರಿ ಕೇಳಿಸಿತು. ಆದರೆ ಜನರಾರೂ ದುರ್ಗದ ಒಳಗೆ ಬಂದಂತೆ ಕಾಣಲಿಲ್ಲ.

"ಮರು ದಿನ ಪ್ರಾತಃಕಾಲ ಒಂಭತ್ತು ಗಂಟೆ ಸುಮಾರಿಗೆ ನವಾಬ್‌ಜಾದಾ ಪುನಃ ದುರ್ಗಕ್ಕೆ ಬಂದ. ಸೇವಕನು ಬಾಗಿಲು ತೆರೆದು ನನ್ನನ್ನು ಪಾರ್ಶ್ವದ ಕೊಟಡಿಗೆ ಕರೆದುಕೊಂಡು ಹೋದಾಗ ನಾನು ಎಂತಹ ಹಳ್ಳಕ್ಕೆ ಬಿದ್ದೆನೆಂಬುದರ ಅರಿವಾಯಿತು. ನವಾಬ್ ಜಾದಾ ನನ್ನನ್ನು ನೋಡಿ ಕುಹಕದ ನಗೆಬೀರಿ—"ಮಗಳನ್ನು ನೋಡಬೇಕೇ ರಾವ್ ಸಾಹೇಬ್" ಎಂದು ಕೇಳಿದ.

"ಅದಕ್ಕಾಗಿಯೇ ಅಲ್ಲವೆ ನೀವು ನನ್ನನ್ನು ಕರೆದುಕೊಂಡು ಬಂದದ್ದು?" ಎಂದೆ ನಾನು.

"ನಿಜ. ಆದರೆ ಈಗ ಪರಿಸ್ಥಿತಿ ಬದಲಾಯಿಸಿದೆ. ಜುನಾಗಡ್ ಸಂಸ್ಥಾನ ಪಾಕಿಸ್ಥಾನಕ್ಕೆ ಸೇರಿತು. ಅಲ್ಲಿ ನಾವು ಹೋಗುವುದು ಸಾಧ್ಯವಿಲ್ಲ. ಗಡಿಗಳಲ್ಲಿ ಪಾಕಿಸ್ಥಾನಿ ಸೈನಿಕರು, ಪೋಲೀಸರು ಕಾವಲಿದ್ದಾರೆ. ರಾತ್ರಿ ಜನರ ಗುಂಪನ್ನು ನೀವೇ ನೋಡಿದಿರಿ. ಸುತ್ತು ಮುತ್ತಿನ ಗ್ರಾಮಗಳಲ್ಲಿನ ಹಿಂದೂಗಳ ಮನೆ ಮಠಗಳನ್ನು ಸುಡುತ್ತಿದ್ದಾರೆ ಅವರು."

"ನಾನು ರಾಜಕೋಟೆಗೆ ಹಿಂದಿರುಗುವುದು ಸಾಧ್ಯವಿಲ್ಲವೇ?"

"ಎರಡು ಮೂರು ದಿನಗಳು ಸಾಧ್ಯವಿಲ್ಲವೆಂದೇ ಕಾಣುತ್ತದೆ. ಅಲ್ಲಿ ಹೋಗಿ ನೀವು ಏನು ಮಾಡುವಿರಿ?"

"ಪೋಲೀಸರಿಗೆ ದೂರು ಕೊಡುತ್ತೇನೆ. ಭಾರತ ಸರ್ಕಾರಕ್ಕೆ ಮನವಿ ಮಾಡಿಕೊಳ್ಳುತ್ತೇನೆ. ನನ್ನ ಮಗಳನ್ನು ಸುಲ್ತಾನನಿಂದ ರಕ್ಷಿಸಲು ಸರ್ವ ಪ್ರಯತ್ನಗಳನ್ನೂ ಮಾಡುತ್ತೇನೆ."

ನವಾಬನು ನನ್ನ ಮಾತು ಕೇಳಿ ಗಟ್ಟಿಯಾಗಿ ನಕ್ಕು ಹೇಳಿದನು: "ನೀವು ಕನಸು ಕಾಣುತ್ತಿದ್ದೀರಿ ರಾವ್ ಸಾಹೇಬ್. ಕರಾಚಿಯಲ್ಲಿ ಮುಸ್ಲಿಮರ ಘೋಷಣೆ ನಿಮಗೆ ನೆನಪಿರಬಹುದು—"ಹೋರಾಡಿ ಪಾಕಿಸ್ಥಾನ್ ಸಂಪಾದಿಸಿದೆವು. ನಗುತ್ತಾ ಭಾರತ ತೆಗೆದುಕೊಳ್ಳುತ್ತೇವೆ" ಎಂದು. ಆ ಮಾತು ಕೆಲವು ದಿನಗಳಲ್ಲೇ ನಿಜವಾಗುವುದು. ಜುನಾಗಡ್ ಪಾಕಿಸ್ಥಾನಕ್ಕೆ ಸೇರಿದ್ದು ಅದರ ಮೊದಲ ಹೆಜ್ಜೆ. ಇನ್ನು ಕೆಲವು ದಿನಗಳಲ್ಲಿಯೇ ಸೌರಾಷ್ಟ್ರದ ಎಲ್ಲಾ ಸಂಸ್ಥಾನಗಳು ಪಾಕಿಸ್ಥಾನಕ್ಕೆ ಸೇರಿ ಹೋಗುವವು."

ನಾನು ಉತ್ತರ ಕೊಡಲಿಲ್ಲ. ಇಂತಹ ಮತಾಂಧ ಸಾಮ್ರಾಜ್ಯವಾದಿಗಳ ಹಗಲು ಕನಸುಗಳನ್ನು ಟೀಕಿಸುವುದು, ಅದೂ ಅವರ ಕೈಗೆ ಸಿಕ್ಕಿರುವಾಗ ಅಪಾಯಕರವೆಂದು ಕರಾಚಿಯಲ್ಲಿ ನನಗೆ ಅನುಭವವಾಗಿತ್ತು. "ಈಗ ನನ್ನನ್ನೇನು ಮಾಡುವಿರಿ ನವಾಬ್ ಸಾಹೇಬ್?" ಎಂದು ವಿನಯದಿಂದ ಕೇಳಿದೆ.

"ನಾನು ಹೇಳಿದಂತೆ ಮಾಡಿದರೆ ನೀವೂ ಉದ್ಧಾರವಾಗುತ್ತೀರಿ. ನಿಮ್ಮ ಮಗಳೂ ಉದ್ಧಾರವಾಗುತ್ತಾಳೆ."

“ನಾನು ಸಿದ್ಧವಾಗಿದ್ದೇನೆ.”

“ನೀವು ಸುಲ್ತಾನನಿಗೆ ಮೋಸಮಾಡಿ ತಂದ ರತ್ನಹಾರ ಕೊಟ್ಟುಬಿಡಿ. ತಂದೆ ಮಗಳಿಬ್ಬರೂ ಉಳಿದುಕೊಳ್ಳುತ್ತೀರಿ.”

“ಹಾರ ನನ್ನದು. ಸುಲ್ತಾನರ ಒಡವೆಯಲ್ಲ.”

“ಅದಕ್ಕೇನು ರುಜುವಾತಿದೆ ? ಸುಲ್ತಾನರಾಗಲೇ ಕರಾಚಿಯಲ್ಲಿ ಪೋಲೀಸರಿಗೆ ಕಂಪ್ಲೈಂಟ್ ಕೊಟ್ಟಿದ್ದಾರೆ. ನಾನು ಹೇಳಿದಂತೆ ಮಾಡದೆ ಹೋದರೆ ಈಗಲೇ ನಿಮ್ಮನ್ನು ಪಾಕಿಸ್ಥಾನ್ ಪೋಲೀಸರಿಗೊಪ್ಪಿಸಿ ಬಿಡುತ್ತೇನೆ. ಆ ಮೇಲೆ ನಿಮ್ಮ ಗತಿಯೇನಾಗುವುದೆಂಬುದನ್ನು ನೀವೇ ಊಹಿಸಬಹುದು.”

ಕರಾಚಿಯಲ್ಲಿ ಪೋಲೀಸರು ನಗರದ ಗೂಂಡಾಗಳೊಡನೆ ಸೇರಿಕೊಂಡು ಹಿಂದೂ ನಿವಾಸಿಗಳಿಗೆ ಕೊಡುತ್ತಿದ್ದ ತೊಂದರೆಯನ್ನು ನಾನು ಕಣ್ಣಾರೆ ಕಂಡಿದ್ದೆ. ಅದರಿಂದ ತಪ್ಪಿಸಿಕೊಳ್ಳಲು ಹೊರಗೆ ಬಂದು ಕಾವಲಿಯಿಂದ ಹಾರಿ ಒಲೆಗೆ ಬಿದ್ದಂತಾಯಿತು ನಮ್ಮ ಗತಿ ಎಂದು ಮನಸ್ಸಿನಲ್ಲಿ ಭಾವಿಸಿಕೊಂಡು ಹೇಳಿದೆ. “ನಮ್ಮ ಪ್ರಾಣಗಳು ನಿಮ್ಮ ಕೈಯಲ್ಲಿದೆ, ನವಾಬ್ ಸಾಹೇಬರೇ. ನನ್ನನ್ನೂ ನನ್ನ ಮಗಳನ್ನೂ ಸುರಕ್ಷಿತವಾಗಿ ರಾಜಕೋಟೆಗೆ ತಲಪಿಸಿದರೆ ರತ್ನಹಾರ ನಿಮಗೆ ಕೊಡುತ್ತೇನೆ.”

“ಕಾಫರನ ಮಾತನ್ನು ಹೇಗೆ ನಂಬುವುದು ?”

ಕೇಳಿ ನನ್ನ ನರಗಳಲ್ಲಿ ರಕ್ತ ಕುದಿದೆದ್ದಿತು. ಆದರೆ ನಿಸ್ಸಹಾಯಕನಾದ, ಮುದುಕನಾದ ನಾನೇನು ಮಾಡುವುದು ? “ಹತ್ತು ವರ್ಷಗಳಿಂದ ಕರಾಚಿಯಲ್ಲಿ ಅನೇಕ ಮಂದಿ ಮುಸ್ಲಿಮರೊಡನೆ ವ್ಯವಹಾರ ನಡೆಸಿದ್ದೇನೆ. ಯಾರೂ ನನ್ನನ್ನು ಅವಿಶ್ವಾಸಿಯೆಂದು, ಮಾತಿಗೆ ತಪ್ಪುವವನೆಂದು ಹೇಳಲಿಲ್ಲ” ಎಂದು ಉತ್ತರ ಕೊಟ್ಟೆ.

ಸ್ವಲ್ಪ ಹೊತ್ತು ಯೋಚಿಸಿ ನವಾಬ್‌ಜಾದಾ “ನೀನು ಸುಲ್ತಾನನನ್ನು ವಂಚಿಸಿದಂತೆ ನನ್ನನ್ನೂ ವಂಚಿಸಲು ಯೋಚಿಸುತ್ತಿರುವೆ. ನಿನ್ನಂತ ಕಾಫರರ

ಬಾಯಿ ಬಿಡಿಸಲು ನನಗೆ ತಿಳಿದಿದೆ." ಎಂದು ಹೇಳಿ ಸಾರಥಿಯನ್ನು ಕೂ ಏನೋ ಹೇಳಿದ. ಸಾರಥಿ ಮತ್ತು ಸೇವಕನು ನನ್ನನ್ನು ಹಿಡಿದು ಕೊಟ ಯಲ್ಲಿದ್ದ ಮಂಚದ ಮೇಲೆ ಮಲಗಿಸಿ ಸರಪಣಿಗಳಿಂದ ಬಿಗಿದರು. ಒದ್ದಾ ಉಪಯೋಗವಿಲ್ಲವೆಂದು ನಾನು ಸುಮ್ಮನಿದ್ದೆ. ಆ ಕ್ಷಣದಿಂದ ನನ್ನ ಚಿತ್ರಹಿಂ ಪ್ರಾರಂಭವಾಯಿತು. ನವಾಬನು ನನ್ನನ್ನು ಅನೇಕ ಪ್ರಶ್ನೆಗಳನ್ನು ಕೇಳಿದನು ಎಲ್ಲಕ್ಕೂ ನಾನು ಒಂದೇ ಉತ್ತರಕೊಟ್ಟೆ. "ನನ್ನ ಹತ್ತಿರಿದ್ದ ಎರಡು ರತ್ನ ಹಾರಗಳೂ ಕೃತಕ ಹಾರಗಳೇ. ನಿಜವಾದ ಹಾರ ಬೊಂಬಾಯಲ್ಲಿ ನನ್ನ ಸ್ನೇಹಿತರೊಬ್ಬರ ಹತ್ತಿರ ಸುರಕ್ಷಿತವಾಗಿದೆ. ನನ್ನನ್ನೂ ನನ್ನ ಮಗಳನ್ನೂ ಬಿಟ್ಟರೆ ಬೊಂಬಾಯಿಗೆ ಹೋಗಿ ನಿಜವಾದ ಹಾರ ನಿಮಗೆ ತಂದು ಕೊಡು ತ್ತೇನೆ" ಎಂದು.

ಕೊನೆಗೆ ನವಾಬ್ ಜಾದಾ ನನ್ನ ಕಟ್ಟುಗಳನ್ನು ಬಿಚ್ಚಿ ಆಹಾರ ಕೊಡು ವಂತೆ ಸೇವಕನಿಗೆ ಹೇಳಿ ಹೊರಟು ಹೋದ. ಸೇವಕನು ಅದರಂತೆ ನನ್ನನ್ನು ಬಿಡುಗಡೆ ಮಾಡಿ ರೊಟ್ಟಿ ನೀರು ತಂದು ಕೊಟ್ಟ. ನಾನು ನೀರು ಕುಡಿದು ಆಹಾರ ತೆಗೆದುಕೊಳ್ಳುವುದಿಲ್ಲವೆಂದು ಹೇಳಿದೆ. ಪುನಃ ಸೇವಕನು ನನ್ನನ್ನು ಹಿಂದಿನಂತೆ ಬಂಧಿಸಿದ. ಆ ದಿನ ಮಧ್ಯ ರಾತ್ರಿ ನವಾಬ್ ಜಾದಾ ಪೆಟ್ಟಿಗೆ ಯನ್ನು ತಂದು ಅದರ ಬೀಗ ತೆಗೆಯುವಂತೆ ಹೇಳಿದ. ಮೊದಲು ನಾನು ನಿರಾಕರಿಸಿದೆ. ಅನಂತರ ಹಿಂಸೆ ತಡೆಯಲಾರದೆ ಪೆಟ್ಟಿಗೆಯ ಬೀಗ ತೆರೆದೆ. ಅಷ್ಟರಲ್ಲಿ ಕಾಮೇಶ್ ಚೌದುರಿ ಅಲ್ಲಿಗೆ ಬಂದು ನನ್ನ ಬಂಧನ ಬಿಡಿಸಿದರು.

—ಎಂದು ಕಿಷನ್‌ಚಂದ್ ತನ್ನ ಕಥೆ ಮುಗಿಸಿದ.

ಆ ಮೇಲೆ ಏನು ನಡೆಯಿತೆಂಬುದನ್ನು ವಿಸ್ತಾರವಾಗಿ ಕೇಳಲು ರಮಾ ನಂದ್ ಮತ್ತು ಪ್ರಮೀಳಾ ಆತುರರಾಗಿದ್ದರು. ತಾನು ಕಾರಿನ ಛಾವಣಿಯ ಮೇಲೆ ಕುಳಿತು ವನದುರ್ಗಕ್ಕೆ ಹೋದದ್ದು, ಅಲ್ಲಿ ನವಾಬ್‌ಜಾದಾ ಮತ್ತು ಸೇವಕನೊಡನೆ ಹೋರಾಟ, ಸೇವಕನ ಮರಣ, ನವಾಬ ಜಾದನ ಬಂಧನ, ಸಾರಥಿಯಿಂದ ಕಾರ್ ಅಪಹರಿಸಿದ್ದು ಇತ್ಯಾದಿ ವಿಚಾರಗಳನ್ನು ಕಾಮೇಶ್ ಸಂಗ್ರಹವಾಗಿ ತಿಳಿಸಿದ.

ರಮಾನಂದ್ ಇದನ್ನು ಕೇಳಿದಾಗ ಆಶ್ಚರ್ಯಾನ್ವಿತನಾದನೆಂದು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ.



## ಹನ್ನೆರಡನೆಯ ಪರಿಚ್ಛೇದ

"ಈಗ ಚಂದ್ರಲೇಖೆಯನ್ನು ರಕ್ಷಿಸುವ ಉಪಾಯವೇನು?"

ಕಿಷನ್‌ಚಂದನ ಕಥೆ ಮುಗಿದ ಮೇಲೆ ರಮಾನಂದ್ ಕೇಳಿದನು.

"ಇರುವುದೊಂದೇ ಉಪಾಯ. ಸಿಂಹವನ್ನು ಅದರ ಗುಹೆಯಲ್ಲೇ ಎದುರಿಸಿ ಹರಿಣವನ್ನು ರಕ್ಷಿಸಬೇಕು."

ಕಾಮೇಶ್ ಉತ್ತರ ಕೊಟ್ಟನು. ಕಿಷನ್‌ಚಂದನ ಮುಖ ಕೃತಜ್ಞತೆಯಿಂದ ಅರಳಿತು. ಕ್ಷಣಕಾಲ ಚಿಂತಿಸಿ ಕಾಮೇಶ್ ಪುನಃ ನುಡಿದನು: "ಆದರೆ ಅದು ನಾವು ಯೋಚಿಸುವಷ್ಟು ಸುಲಭವಾದ ಕಾರ್ಯವಲ್ಲ. ಸುಲ್ತಾನನ ನಿವಾಸ ಜುನಾಗಡ್ ಸಂಸ್ಥಾನದಲ್ಲಿ. ಈಗ ಅದು ಪಾಕಿಸ್ಥಾನಕ್ಕೆ ಸೇರಿರುವುದರಿಂದ ಪಾಕಿಸ್ಥಾನಿ ಸೈನಿಕರು, ಪೋಲೀಸರು ತುಂಬಿರುತ್ತಾರೆ."

"ವಿಖ್ಯಾತ ಪತ್ತೆದಾರ್ ಕಾಮೇಶ್ ಚೌದುರಿ ಪಾಕಿಸ್ಥಾನೀ ಪೋಲೀಸರಿಗೆ ಹೆದರುವನೇ?"

ರಮಾನಂದ್ ಕುಚೋದ್ಯದ ದನಿಯಿಂದ ನುಡಿದ.

"ಸ್ವಯಂ ಮೃತ್ಯುವಿಗೆ ಹೆದರದಿರುವ ಕಾಮೇಶ್ ಸಾಮಾನ್ಯ ಸೈನಿಕರು, ಪೋಲೀಸರು ಮುಂತಾದವರಿಗೆ ಹೆದರುವನೇ? ನಿನ್ನ ಕುಚೋದ್ಯದ ಮಾತು

ನಿಲ್ಲಿಸು ರಮಾನಂದ್. ನಾನು ಈಗಲೆ ಜುನಾಗಡ್ ಸಂಸ್ಥಾನದಲ್ಲಿರು ಸುಲ್ತಾನನ ಜಹಗೀರಿಗೆ ಹೋಗಲು ಯೋಚಿಸಿದ್ದೇನೆ. ಧೈರ್ಯವಿದ್ದ ಸಂಗಡ ಬಾ."

ಕಾಮೇಶನ ಆಹ್ವಾನ ರಮಾನಂದನಿಗೆ ರುಚಿಸಲಿಲ್ಲ, "ಇದು ಧೈರ್ಯ ವಿಚಾರವಲ್ಲ, ಕಾಮೇಶ್. ಉರಿಯುತ್ತಿರುವ ಅಗ್ನಿ ಕುಂಡಕ್ಕೆ ಬುದ್ಧಿ ಪೂರ್ವ ವಾಗಿ ಧುಮುಕುವವರನ್ನು ನಾನು ಧೈರ್ಯಶಾಲಿಗಳೆಂದು ಕರೆಯುವುದಿಲ್ಲ' ಎಂದು ಕುಹಕದ ಮಾತಾಡಿದ.

"ಹಾಗಾದರೆ ಅಂತಹವರನ್ನು ಏನೆಂದು ಕರೆಯುವೆ?"

"ತಿಳಿಗೇಡಿ ಮೂರ್ಖರೆಂದು"

ಕಾಮೇಶ್ ಕೈಯಲ್ಲಿದ್ದ ವಾರ್ತಾ ಪತ್ರಿಕೆಯನ್ನು ರಮಾನಂದನ ಮೇಲೆ ಸೆದು ಹೇಳಿದ: "ನೀನು ಇಂಗ್ಲೆಂಡಿಗೆ ಹೋದದ್ದು ಈ ಕುಹಕದ ಮಾತುಗಳನ್ನು ಕಲಿಯುವುದಕ್ಕೇ ಎಂದು ಕಾಣುತ್ತದೆ. ಆದರೆ ಈ ವಾಗ್ಬಾಣಗಳು ನನ್ನನ್ನು ಚುಚ್ಚಲಾರವು, ರಮಾನಂದ್. ವಕೀಲರ ಧೈರ್ಯ ಸಾಹಸಗಳೆಲ್ಲಾ ಕಕ್ಷಿಗಾರರ ಮುಂದೆ ಎಂದು ಹೇಳುವುದನ್ನು ಕೇಳಿದ್ದೇನೆ. ನಿನ್ನ ವಿಚಾರದಲ್ಲಿ ಆ ಮಾತು ಕೂಡಾ ನಿಜವಾಗಲಿಲ್ಲ."

ಈ ಕಚ್ಚಾಟವನ್ನು ಕಂಡು ಕಿಸನ್‌ಚಂದ್ ಅಪ್ರತಿಭನಾಗಿ "ನೀವಿಬ್ಬರೂ ಯೋಚನೆ ಮಾಡಿ ನನ್ನ ಮಗಳನ್ನು ಆ ದಾನವರ ಬಾಯಿಂದ ಉದ್ಧಾರ ಮಾಡಬೇಕು" ಎಂದು ಬೇಡಿಕೊಂಡ.

ಕಾಮೇಶನಿಗೆ ಮುದುಕನ ಮೇಲೆ ಕರುಣೆ ಹುಟ್ಟಿತು. ಅನುನಯದ ಕಂಠದಿಂದ ಅವನು ಹೇಳಿದ. "ನೀವು ಚಿಂತಿಸಬೇಡಿ, ಕಿಸನ್‌ಚಂದರೆ. ಮೂರು ದಿನಗಳಲ್ಲಿ ನಿಮ್ಮ ಮಗಳನ್ನು ಕರೆತಂದು ನಿಮಗೊಪ್ಪಿಸದೆ ಹೋದರೆ ನನ್ನ ಹೆಸರು ಕಾಮೇಶ್ ಚೌದುರಿಯೇ ಅಲ್ಲ. ರಮಾನಂದ್ ಇಲ್ಲಿಯೇ ನಿಮ್ಮ ಸಂಗಡಿರಲಿ. ಅವರನ್ನು ಸಂಗಡ ಕರೆದುಕೊಂಡು ಹೋಗಿ ನೀವು ರಾಜ ಕೋಟೆಯ ಪೋಲೀಸ್ ಸೂಪರಿಂಡೆಂಟರನ್ನು ನೋಡಿ ಎಲ್ಲ ವಿಚಾರವನ್ನೂ ತಿಳಿಸಿ ಭಾರತ ಸರ್ಕಾರಕ್ಕೂ ಒಂದು ಅರ್ಜಿ ಬರೆದುಕೊಂಡಿದ್ದರೆ ಅನುಕೂಲ.

ಜನಾಗಡ್ ಸಂಸ್ಥಾನ ಪಾಕಿಸ್ಥಾನಕ್ಕೆ ಸೇರಿರುವ ವಿಚಾರ ರಗಳೆಗಿಟ್ಟುಕೊಂಡರೆ ಆ ಅರ್ಜಿ ನಮಗೆ ಸಹಾಯವಾಗುತ್ತದೆ."

ಅಪರಂತೆ ಪ್ರಯಾಣಕ್ಕೆ ಸಿದ್ಧತೆಗಳು ನಡೆಯಿತು. ಮಧ್ಯಾಹ್ನ ಬಸ್ಸಲ್ಲಿ ಸುಲ್ತಾನನ ಜಹಗೀರಿಯಿದ್ದ ಪಠಾನ್‌ಕೋಟೆಗೆ ಕಾಮೇಶ್ ಹೋಗತಕ್ಕದ್ದೆಂದು ನಿರ್ಧರವಾಯಿತು. ಪ್ರಮೀಳಾ ತಾನೂ ಸಂಗಡ ಬರುವುದಾಗಿ ಹೇಳಿದಳು. "ನಾನು ಹೋಗುವುದು ಅಪಹೃತ ಹೆಂಗಸೊಬ್ಬಳನ್ನು ಹುಡುಕಿ ಕರೆತರುವುದಕ್ಕೆ. ನಿನ್ನನ್ನು ಸಂಗಡ ಕರೆದುಕೊಂಡು ಹೋದರೆ ಒಬ್ಬರ ಬದಲಿಗೆ ಇಬ್ಬರು ಅಪಹೃತ ಸ್ತ್ರೀಯರನ್ನು ಹುಡುಕಬೇಕಾದ ಪ್ರಸಂಗ ಉಂಟಾಗಬಹುದು" ಎಂದು ಕಾಮೇಶ್ ನಿಷೇಧಿಸಿದಾಗ ಪ್ರಮೀಳಾ "ನನ್ನನ್ನು ಅಪಹರಿಸಬಲ್ಲ ಗಂಡಸು ಜುನಾಗಡದಲ್ಲಿರುವನೇ ಎಂಬುದನ್ನು ನೋಡಿ ಬಿಡುತ್ತೇನೆ. ಅಲ್ಲದೆ ಅಪಹೃತ ಹೆಂಗಸರನ್ನು ಹುಡಕಲು ಹೆಂಗಸರ ಸಹಾಯ ಅಗತ್ಯ" ಎಂದು ಉತ್ತರ ಕೊಟ್ಟು ತನ್ನ ವಾದವನ್ನು ಸಾಧಿಸಿಕೊಂಡಳು.

ಆ ದಿನ ಸಂಜೆ ಪಠಾನ್ ಕೋಟೆಯಲ್ಲಿ ಬಸ್ ನಿಂತಾಗ ಸಂಸ್ಥಾನೀ ಪೋಲೀಸರ ಸಮವಸ್ತ್ರ ಧರಿಸಿದ್ದ ಮಧ್ಯಮ ವಯಸ್ಸಿನ ಪುರುಷನೊಬ್ಬನೂ, ಅವನ ಸಂಗಡ ಬುರ್ಕಾ ಹಾಕಿಕೊಂಡಿದ್ದ ಒಬ್ಬ ಯುವತಿಯೂ ಕೆಳಗಿಳಿದರು. ಅವರು ತಂದಿದ್ದ ಸಾಮಾನು ಸರಂಜಾಮುಗಳನ್ನು ನೋಡಿದರೆ ಭಾರತದಿಂದ ಪಾಕಿಸ್ಥಾನಕ್ಕೆ ಒಲಸೆ ಹೋಗುವ ಮುಸ್ಲಿಂ ದಂಪತಿಗಳಂತೆ ಕಾಣುತ್ತಿದ್ದರು. ಬಸ್ ಮುಂದೆ ಹೋದ ಮೇಲೆ ಪುರುಷನು ನಿಲ್ದಾಣದಲ್ಲಿದ್ದ ಗಾಡಿಯವನನ್ನು ಕರೆದು ಸುಲ್ತಾನರ ಜಹಗೀರಿಗೆ ಬಾಡಿಗೆ ಮಾತಾಡಿದನು.

"ಸುಲ್ತಾನರ ಮಹಲ್ ಇಲ್ಲಿಂದ ಮೂರು ಮೈಲಿ ಆಗುತ್ತದೆ ಸಾಹೇಬ್. ಐದು ರೂಪಾಯಿ ಕೊಡುವುದಾದರೆ ಬರುತ್ತೇನೆ." ಗಾಡಿಯವನು ಹೇಳಿದನು.

"ಸಾಮಾನುಗಳನ್ನು ಗಾಡಿಗೆ ತುಂಬು. ಸಂಜೆಯಾಗುವುದರೊಳಗೆ ಮಹಲಿಗೆ ಹೋದರೆ ನಿನ್ನ ಬಾಡಿಗೆಯಲ್ಲದೆ ಒಂದು ರೂಪಾಯ್ ಬಕ್ಷೀಸ್ ಕೊಡುತ್ತೇನೆ."

ಎಂದು ಹೇಳಿ ಪುರುಷನು ಸಾಮಾನುಗಳನ್ನು ಗಾಡಿಯಲ್ಲಿಡಿಸಿ ಯುವತಿಯನ್ನು ಕುಳ್ಳಿರಿಸಿದ. ತಾನು ಗಾಡಿಯವನ ಪಾರ್ಶ್ವದಲ್ಲಿ ಕುಳಿತುಕೊಂಡ.

ದಾರಿ ಸವೆಯುತ್ತಿದ್ದಂತೆ ಗಾಡಿಯವನಿಗೆ ಬೀಡಿ ತಂಬಾಕುಗಳನ್ನು ಕೊಟ್ಟು ಮಾತಿಗೆ ಪ್ರಾರಂಭಿಸಿದ.

"ಸುಲ್ತಾನರನ್ನು ನೋಡಲು ಬಹಳ ಜನ ಬರುವರೇ?"

"ಬಾರದೆವುಂಟೆ? ಸಾಹೇಬ್. ಸುಲ್ತಾನ್ ಒಳ್ಳೆ ದಿಲ್ದಾರ್ ಮನುಷ್ಯ. ಗವಾಯಿಗಳು, ನಾಚ್‌ವಾಲಿಗಳು, ನಾಯಕಿನಿ*ಯರು ದಿನವಹಿ ಬರುತ್ತಲೇ ಇರುತ್ತಾರೆ."

"ಸುಲ್ತಾನರು ಅವರಿಗೆ ಒಳ್ಳೇ ಬಹುಮಾನ ಕೊಡುವರೆಂದು ಕಾಣುತ್ತದೆ?"

"ಕೊಡುತ್ತಾರೆ, ಸಾಹೇಬ್? ಈ ದುರ್ಭಿಕ್ಷದ ಕಾಲದಲ್ಲಿಯೂ ಸುಲ್ತಾನರು ಮೊಗಲ್ ಬಾದಷಹರಂತೆ ಎರಡು ಕೈಯಿಂದಲೂ ಕೊಡುತ್ತಾರೆ. ಒಂದು ತಿಂಗಳ ಹಿಂದೆ ಬೊಂಬಾಯಿಂದ ನಾಯಕಿನಿಯೊಬ್ಬಳು ಬಂದಿದ್ದಳು. ಮೂರು ದಿನವಿದ್ದು ಮೂರು ಸಾವಿರ ರೂಪಾಯಿ ತೆಗೆದುಕೊಂಡು ಹಿಂದಿರುಗಿದಳು."

ಎಂದು ಹೇಳಿ ಗಾಡಿಯವನು ಅರ್ಥಗರ್ಭಿತವಾದ ದೃಷ್ಟಿಯಿಂದ ಒಳಗೆ ಕುಳಿತಿದ್ದ ಹೆಂಗಸಿನ ಕಡೆ ನೋಡಿದನು.

ಪುರುಷನು ಅದನ್ನು ಗಮನಿಸದೆ "ನಾಯಕಿನಿ ಸುಂದರಿಯಾಗಿದ್ದಳೇ?" ಎಂದು ಪ್ರಶ್ನಿಸಿದನು.

"ಖೂಬ್ ಸೂರತ್. ಅದಕ್ಕೇ ಸುಲ್ತಾನರು ಅಷ್ಟೊಂದು ಹಣ ಕೊಟ್ಟದ್ದು."

ಗಾಡಿಯವನು ಪುನಃ ಯುವತಿಯ ಮೇಲೆ ದೃಷ್ಟಿ ಹಾಯಿಸಿದನು. ಆಗ ಪುರುಷನು "ನನ್ನ ಬೀಬಿಯೂ ಖೂಬ್‌ಸೂರತ್, ದೋಸ್ತ್. ಎರಡು ದಿನ ಮಹಲಿನಲ್ಲಿ ಸುಲ್ತಾನರ ಅತಿಥಿಯಾಗಿದ್ದು ಹೋಗೋಣವೆಂದು ಬಂದಿದ್ದೇನೆ" ಎಂದು ಹೇಳಿದನು.

---

* ಬೊಂಬಾಯ್ ಪ್ರಾಂತವಲ್ಲಿ ವೇಶ್ಯೆಯರನ್ನು "ನಾಯಕಿನಿ" ಎಂದು ಕರೆಯುತ್ತಾರೆ.

ಗಾಡಿಯವನು ಹಲ್ಲುಕಿರಿದು "ಇದು ದುನಿಯಾ ಸಾಹೇಬ್. ದುನಿಯಾ ನಡೆದಂತೆ ನಾವೂ ನಡೆಯಬೇಕು" ಎಂದಾಗ ಒಳಗಿದ್ದ ಯುವತಿ ಪರದೆಯ ಮರೆಯಲ್ಲಿ ಕಿಲಕಿಲ ನಕ್ಕಳು.

ಗಾಡಿಯವನು ಅಪ್ರತಿಭನಾಗಿ "ನಿಮ್ಮ ಬೀಬಿಗೆ ಗಾನಾ ನಾಚ್ ಬರುತ್ತದೆಯೇ ಸಾಹೇಬ್?" ಎಂದು ಪ್ರಶ್ನಿಸಿದನು.

"ಅದೊಂದೂ ಬರುವುದಿಲ್ಲ. ನಗುವುದಕ್ಕೆ, ಮಾತಾಡುವುದಕ್ಕೆ, ಕಣ್ಣು ತಿರುಗಿಸುವುದಕ್ಕೆ ಚನ್ನಾಗಿ ಕಲಿತಿದ್ದಾಳೆ."

ಪುರುಷನು ಉತ್ತರ ಕೊಟ್ಟನು.

"ಔರತ್ತಿಗೆ ರೂಪವೊಂದಿದ್ದರೆ ಉಳಿದೆಲ್ಲಾ ಇದ್ದಂತೆ." ಗಾಡಿಯವನ ಸಿದ್ಧಾಂತ ಕೇಳಿ ಯುವತಿಯ ನಗು ಹೆಚ್ಚಿತು. ಗಾಡಿಯವನು, ಇವರಾರೋ ನೋಡಿದರೆ ಕಸಬುದಾರಿ ಆಸಾಮಿಗಳೆಂದು ಮನಸ್ಸಿನಲ್ಲಿ ಭಾವಿಸಿಕೊಂಡು "ಹೆಯ್ ಹೆಯ್" ಎಂದು ಕುದುರೆಗಳೊಡನೆ ಸಂಭಾಷಣೆಗೆ ಪ್ರಾರಂಭಿಸಿದನು.

ಮಹಲ್ ಇನ್ನೂ ದೂರದಲ್ಲಿರುವಾಗಲೇ ಗಾಡಿನಿಲ್ಲಿಸಿ "ಇಲ್ಲಿಂದ ಮುಂದೆ ಹೋಗಲು ಹುಕುಂ ಇಲ್ಲ ಸಾಹೇಬ್." ಎಂದು ಗಾಡಿಯವನು ಹೇಳಿದನು.

ಪುರುಷನು ಮೊದಲು ಗೊತ್ತು ಮಾಡಿದ್ದಂತೆ ಬಾಡಿಗೆ ಐದು ರೂಪಾಯಿ ಬಕ್ಷೀಸು ಒಂದು ರೂಪಾಯಿ ಕೊಟ್ಟು ಸಾಮಾನು ಸಾಗಿಸಲು ಹುಡುಗನೊಬ್ಬನನ್ನು ಗೊತ್ತು ಮಾಡಿಕೊಂಡು ಮಹಲಿನ ಕಡೆಗೆ ಹೋದನು.

ಗಾಡಿಯವನು ಸಲಾಂ ಮಾಡಿ ಬೀಳ್ಕೊಳ್ಳುವ ಮೊದಲು ಪುರುಷನನ್ನು ಕರೆದು "ಸುಲ್ತಾನರ ಜನಾನಾದಲ್ಲಿ ಒಬ್ಬ ಹಬ್ಸಿ ಖೋಜಾ ಇದ್ದಾನೆ. ಅವನ ಕೈಗೆ ಹತ್ತು ರೂಪಾಯಿ ನೋಟು ಕೊಟ್ಟರೆ ನಿಮ್ಮ ಕೆಲಸ ಸಲೀಸಾಗಿ ಆಗುತ್ತೆ" ಎಂದು ಸೂಚನೆ ಕೊಟ್ಟನು.

ಪುರುಷನು ಉತ್ತರ ಕೊಡದಿದ್ದುದನ್ನು ನೋಡಿ ಗಾಡಿಯವನು ಪುನಃ ಸಲಾಂ ಮಾಡಿ ಬೇರೆ ಬಾಡಿಗೆ ಹುಡುಕಲು ಹೊರಟನು. ಸುಲ್ತಾನನ ಮಹಲ್

ಸಣ್ಣ ದುರ್ಗದಂತಿದ್ದಿತು. ಸುತ್ತ ಕೋಟೆಯಂತೆ ಬಲವಾದ ಗೋಡೆ, ಬುರುಜುಗಳು, ಕಂದಕ, ಮಹಾದ್ವಾರ, ಕಾವಲು ಗೋಪುರಗಳು.

ಪುರುಷನೂ ಯುವತಿಯೂ ಮಹಾದ್ವಾರದ ಹತ್ತಿರ ಹೋದಾಗ ಅಲ್ಲಿದ್ದ ಕಾವಲುಗಾರನು "ಯಾರನ್ನು ನೋಡಬೇಕು?" ಎಂದು ಕೇಳಿದನು.

"ನಾನೊಬ್ಬ ಪೋಲೀಸ್ ಅಧಿಕಾರಿ. ಸುಲ್ತಾನರ ಹತ್ತಿರ ಚಾಕರಿಗಾಗಿ ಬಂದಿದ್ದೇನೆ"

ಪುರುಷನ ಉತ್ತರ ಕೇಳಿ ಕಾವಲುಗಾರನು ಒಳಗೆ ಹೋಗಿ ಹಸರುಬಣ್ಣದ ದೊಡ್ಡ ಪಗಡಿ ಧರಿಸಿದ್ದ ಹಬ್ಸಿಯೊಬ್ಬನನ್ನು ಕರೆತಂದನು. ಹಬ್ಸಿಯು ಪುರುಷನನ್ನು ಆಪಾದ ಮಸ್ತಕ ದುರುಗುಟ್ಟಿ ನೋಡಿ "ಈಗ ಸುಲ್ತಾನರನ್ನು ನೋಡುವುದು ಸಾಧ್ಯವಲ್ಲ. ಬೆಳಗಿನವರಿವಿಗೂ ಕಾದಿರಬೇಕು" ಎಂದು ಹೇಳಿದನು.

"ಬೇಕಾದರೆ ನಾನು ಕಾದಿರಬಲ್ಲೆ. ನನ್ನ ಸಂಗಡಿರುವ ಈ ಬೀಬಿ—ಅವಳನ್ನೇನು ಮಾಡುವುದು? ಸುಲ್ತಾನರನ್ನು ನೋಡುವ ಉದ್ದೇಶದಿಂದಲೇ ದೂರದಿಂದ ಬಂದಿದ್ದಾಳೆ."

ಪುರುಷನು ಮಾತಾಡುತ್ತಿದ್ದಂತೆ ಯುವತಿಯು ಅವಕುಂಠನವನ್ನು ಸರಿಸಿ ಹಬ್ಸಿಯ ಮೇಲೆ ಕಟಾಕ್ಷ ಬಾಣವೊಂದನ್ನು ಎಸೆದಳು. ಮಿಂಚು ಹೊಡೆದಂತೆ ಹಬ್ಸಿ ಸ್ತಂಭಿತನಾಗಿ "ಸಮಯ ನೋಡಿ ಬರುತ್ತೇನೆ, ಹುಜೂರ್. ನೀವೂ ಬೀಬಿಯವರೂ ಇಲ್ಲಿ ಕುಳಿತುಕೊಳ್ಳಿ" ಎಂದು ಹೇಳಿ ಮಹಲಿನ ಒಳಗೆ ಹೋದನು.

"ಹೇಗಿದೆ ನೋಡಿದಿರಾ ಹೆಣ್ಣಿನ ಜೋಕು!"

ಎಂದು ಯುವತಿ ಪುರುಷನನ್ನು ಕುಟುಕಿದಳು.

"ಇದು ಮೊದಲನೆಯ ಹೆಜ್ಜೆ. ಮುಂದಿದೆ ನಿನ್ನ ಪರೀಕ್ಷೆ."

ಎಂದು ಪುರುಷನು ಪ್ರತಿಯಾಗಿ ಕುಟುಕಿದನು.

ಹಬ್ಸಿ ಬರುವವರೆಗೆ ಈ ಚಲ್ಲಾಟ ನಡೆಯುತ್ತಿತ್ತು. "ಸುಲ್ತಾನರು ದೊಡ್ಡ ಮನಸ್ಸು ಮಾಡಿ ದರ್ಶನ ಕೊಡಲು ಒಪ್ಪಿದ್ದಾರೆ. ನನ್ನ ಸಂಗಡ ಬನ್ನಿ"

ಎಂದು ಹೇಳಿ ಹಬ್ಸಿಯು ಪುರುಷನನ್ನೂ ಯುವತಿಯನ್ನೂ ಮಹಲಿನೊಳಗೆ ಕರೆದುಕೊಂಡು ಹೋದನು.

ಅದು ಸುಲ್ತಾನನ ಏಕಾಂತ ಸಮಯ. ಜನಾನಾ ಭಕ್ತಿಯ ಸಂಗಡ ಮಂತ್ರಾಲೋಚನೆ ನಡೆಸುತ್ತಿದ್ದಾಗ ಹಬ್ಸಿಯು ಆಗಂತುಕರನ್ನು ಸುಲ್ತಾನನ ಸನ್ನಿಧಾನಕ್ಕೆ ಕರೆತಂದನು. ಪುರುಷನು ಮೊಗಲ್ ಪದ್ಧತಿಯಂತೆ ಕುರ್ನಿಷ್ ಮಾಡಿ "ನಾನು ಬಾಬರ್‌ವಾಡ್ ಸಂಸ್ಥಾನದ ಪೋಲೀಸ್ ಅಧಿಕಾರಿ. ಸುಲ್ತಾನರ ಕೀರ್ತಿ ಪ್ರತಿಷ್ಠೆಗಳನ್ನು ಕೇಳಿ ದರ್ಶನಕ್ಕಾಗಿ ಬಂದಿದ್ದೇನೆ" ಎಂದು ಪರಿಚಯ ಪತ್ರವೊಂದನ್ನು ಹಬ್ಸಿಯ ಕೈಯಿಂದ ಸುಲ್ತಾನನಿಗೊಪ್ಪಿಸಿದನು.

ಸುಲ್ತಾನನು ನಿರಕ್ಷರ ಕುಕ್ಷಿಯಾದರೂ ಬಾದಷಾಹಿ ದರ್ಪದಿಂದ ಕಾಗದವನ್ನು ಹಿಂದು ಮುಂದು ತಿರುಗಿಸಿ ನೋಡಿ ಸಂಸ್ಥಾನೀ ಪೋಲೀಸರಿಗೆ ಸರ್ಕಾರ ಕೊಡುವ ರಹದಾರಿಯೇ ಎಂದು ನಿರ್ಧರ ಮಾಡಿಕೊಂಡು "ನೀವು ಬಂದ ಕಾರಣ?" ಎಂದು ಪ್ರಶ್ನಿಸಿದನು.

"ಈ ಕಾಫರರ ರಾಜ್ಯದಲ್ಲಿ ಇರುವ ಇಚ್ಛೆಯಿಲ್ಲ, ಖೋದಾಬಂದ್. ನಿಮ್ಮ ಆಶ್ರಯ ದೊರಕಿದರೆ ನಾನು ಮತ್ತು ಈ ನನ್ನ ಬೀಬಿ ಪಾಕಿಸ್ಥಾನಕ್ಕೆ ಬಂದು ಬಿಡುತ್ತೇವೆ."

"ಬಾಬರ್‌ವಾಡಿನಲ್ಲಿ ನಿನ್ನ ಕೆಲಸ?"

"ಅದು ಭಾರತಕ್ಕೆ ಸೇರಿದ ದಿನವೇ ನಾನು ಕೆಲಸಕ್ಕೆ ರಾಜಿನಾಮೆ ಕೊಟ್ಟೆ"

"ಯಾರು ಹೇಳಿದರು ಬಾಬರ್‌ವಾಡ್ ಭಾರತಕ್ಕೆ ಸೇರಿತೆಂದು?"

"ನನಗೆ ಖುದ್ದಾಗಿ ತಿಳಿದಿದೆ ಖೋದಾಬಂದ್. ನಿನ್ನೆ ಭಾರತದ ಅಧಿಕಾರಿಗಳು ಬಂದು ರಾಜನನ್ನು ಕಂಡಿದ್ದರು. ಪತ್ರಕ್ಕೆ ಸಹಿಯಾಯಿತು."

ಆಗಂತುಕನ ಮಾತು ಕೇಳಿ ಸುಲ್ತಾನನು ಚಡಪಡಿಸಿದನು. "ಇದೆಲ್ಲಾ ಆ ಕಾಫರರ ಪಿತೂರಿ! ಜುನಾಗಡ್ ಪಾಕಿಸ್ಥಾನಕ್ಕೆ ಸೇರಿರುವಾಗ ಬಾಬರ್

ವಾಡ್ ಭಾರತಕ್ಕೆ ಹೇಗೆ ಸೇರುತ್ತದೆ? ನಾಳೆಯೇ ಜುನಾಗಡದ ದಿವಾನನನ್ನು ನೋಡಿ ಈ ವಿಚಾರ ಇತ್ಯರ್ಥ ಮಾಡುತ್ತೇನೆ'' ಎಂದನು.

"ಖಾವಂದರು ಮನಸ್ಸು ಮಾಡಿದರೆ ಕಾತೆವಾಡ್ ಸಂಸ್ಥಾನಗಳನ್ನೆಲ್ಲಾ ಪಾಕಿಸ್ಥಾನಕ್ಕೆ ಜಮಾ ಮಾಡಿಕೊಳ್ಳಬಹುದು."

ಜನಾನಾ ಭಕ್ಷಿ ನಮ್ರನಾಗಿ ವಿಜ್ಞಾಪಿಸಿಕೊಂಡನು.

ಸುಲ್ತಾನನಿಗೆ ರೇಗಿತು. "ಸುಮ್ಮನಿರು, ಲಫಂಗ. ರಾಜ್ಯವಾಳುವುದು ಜನಾನಾ ಆಡಳಿತದಷ್ಟೇ ಸುಲಭವೆಂದು ತಿಳಿದೆಯಾ!" ಎಂದು ಭಕ್ಷಿಯನ್ನು ಗದರಿಸಿ ಆಗಂತುಕನ ಕಡೆ ತಿರುಗಿ "ನಿನ್ನ ಹೆಸರೇನು, ದರೋಗ?" ಎಂದು ಕೇಳಿದನು.

"ನನ್ನ ಹೆಸರು ಕರೀಂಖಾನ್. ನನ್ನ ಬೀಬಿಯ ಹೆಸರು ಪ್ಯಾರೀಬಾನೂ"

ಆಗಂತಕನು ಉತ್ತರ ಕೊಟ್ಟನು.

"ಹೆಸರು ನನಗೆ ಖೂಬ್ ಪಸಂದಾಗಿದೆ. ಖಂಡಿತ ನಿಮ್ಮನ್ನು ಕರೆದು ಕೊಂಡು ಹೋಗುತ್ತೇನೆ. ಪಾಕಿಸ್ಥಾನದಲ್ಲಿ ದೊಡ್ಡ ಚಾಕರಿ ಕೊಡಿಸುತ್ತೇನೆ. ನಿಮಗಾಗಿಯೇ ನಾವು ರಾಜ್ಯ ಕಟ್ಟಿದ್ದು."

ಎಂದು ಸುಲ್ತಾನನು ಗಂಭೀರವಾಗಿ ನುಡಿದನು.

"ಖುದಾ ನನ್ನ ಮೇಲೆ ದಯೆ ಮಾಡಿದನು ಹುಜೂರ್. ಅದರಿಂದಲೇ ನಿಮ್ಮ ಅನುಗ್ರಹ ದೊರೆಯಿತು"

ಎಂದು ಆಗಂತುಕನು ಪುನಃ ಕುರ್ನಿಷ್ ಮಾಡಿದನು.

ಸುಲ್ತಾನನು ಸ್ವಲ್ಪ ಹೊತ್ತು ಚಿಂತಿಸಿ "ಆದರೆ ಪಾಕಿಸ್ಥಾನಕ್ಕೆ ಹೋಗುವ ಮೊದಲು ಇಲ್ಲಿ ಮಾಡಬೇಕಾದ ಒಂದೆರಡು ಕೆಲಸಗಳಿವೆ, ಕರೀಂಖಾನ್" ಎಂದನು.

"ಆಜ್ಞೆ ಮಾಡಿರಿ, ಹುಜೂರ್. ಈ ಪೋಲೀಸ್ ದರೋಗನ ಹಿಕ್ಮತ್ ಎಂಥಾದ್ದೆಂಬುದನ್ನು ತೋರಿಸುತ್ತೇನೆ. ಹುಜೂರ್ ಮನಸ್ಸು ಮಾಡಿದರೆ

ಕಾಥೆವಾಡ್ ಸಂಸ್ಥಾನಗಳನ್ನು ಒಂದು ದಿನದಲ್ಲಿ ಪಾಕಿಸ್ಥಾನಕ್ಕೆ ಸೇರಿಸಿಕೊಳ್ಳಬಹುದು."

ಆಗಂತುಕನು ಉತ್ಸಾಹದಿಂದ ಉತ್ತೇಜನಗೊಂಡವನಂತೆ ಆವೇಶದಿಂದ ಈ ಮಾತುಗಳನ್ನು ಹೇಳಿದ್ದನ್ನು ಕೇಳಿ ಯುವತಿ ಪರದೆಯಲ್ಲಿ ಮೃದುವಾಗಿ ನಕ್ಕಳು. ಆ ನಗುವಿನ ಶಬ್ಧ ಪರದೆಯನ್ನು ಹಾದು ಗೆಜ್ಜೆಯ ದನಿಯಂತೆ ಸುಲ್ತಾನನ ಕಿವಿಗಳನ್ನು ಮುಟ್ಟಿದವು. ಅವನು ಯುವತಿಯನ್ನು ದೃಷ್ಟಿಸಿ. "ನಿನ್ನ ಬೀಬಿ ಬಹಳ ಹುಷಿಯಾರ್ ಔರತ್ ಅಂತ ಕಾಣುತ್ತೆ, ಕರೀಂಖಾನ್. ನಿಮಗಾಗಿ ಮಹಲಿನಲ್ಲಿ ಪ್ರತ್ಯೇಕ ಬಿಡಾರ ಏರ್ಪಡಿಸುತ್ತೇನೆ. ರಾತ್ರಿ ವಿಶ್ರಮಿಸಿಕೊಳ್ಳಿ. ಬೆಳಿಗ್ಗೆ ಮಾತಾಡೋಣ." ಎಂದು ಆಗಂತುಕನಿಗೆ ಹೇಳಿದನು.

ಸುಲ್ತಾನನ ಸೂಚನೆಯಂತೆ ಭಕ್ಷಿ ಪುರುಷನನ್ನೂ ಯುವತಿಯನ್ನೂ ಮಹಲಿನೊಳಗೆ ಕರೆದುಕೊಂಡು ಹೋಗಿ ಪ್ರತ್ಯೇಕವಾಗಿದ್ದ ಎರಡು ಕೊಟಡಿಗಳನ್ನು ತೋರಿಸಿದನು.

"ಇದು ಇವರಿಗೆ ಸರಿಹೋಗುತ್ತೆ, ಖೋಜಾ ಸಾಹೇಬ್. ನನಗೆ ಜನಾನಾದಲ್ಲಿ ಒಂದು ಕೊಟಡಿ ಬಿಡಸಿಕೊಡಿ."

ಯುವತಿ ಹೇಳಿದಳು. ಒಳಗೆ ಹೋಗುತ್ತಲೆ ಅವಳು ಪರದೆ ತೆಗೆದು ಹಾಕಿದ್ದರಿಂದ ಅಸಾಧಾರಣ ರೂಪವತಿಯೆಂಬುದು ಭಕ್ಷಿಗೆ ಗೋಚರವಾಯಿತು.

"ಹಾಗಾದರೆ ನೀವು ಇವರ ಸಂಗಡ ಇರುವುದಿಲ್ಲವೇ, ಬೀಬಿ ಸಾಹೇಬಾ ?"—ಖೋಜಾ ಕೇಳಿದನು.

"ಇಷ್ಟು ದಿನವಿದ್ದು ಬೇಸರವಾಗಿದೆ. ಇವತ್ತಿನಿಂದ ಪ್ರತ್ಯೇಕವಾಗುತ್ತೇನೆ. ಸರಿಯಾದ ಸಂಬಂಧ ಸಿಕ್ಕಿದರೆ ತಲಾಕ್ ಕೊಡಲೂ ಸಿದ್ಧ"

ಯುವತಿ ನಗುತ್ತ ಹೇಳಿದಳು.

"ಜನಾನಾದಲ್ಲಿ ಹೆಚ್ಚು ಮಂದಿ ಹೆಂಗಸರಿದ್ದಾರೆ, ಬೀಬಿ ಸಾಹೇಬಾ. ಅಲ್ಲಿಯ ಗಲಭೆ ನಿಮಗೆ ಸರಿ ಹೋಗುವುದೋ ಇಲ್ಲವೋ ?"

“ಸರಿಹೋಗದಿರಲು ನಾನೇನು ಗಂಡಸೇ? ಈ ಕೊಟಡಿಯಲ್ಲಿ ಇವರ ಸಂಗಡ ಖೈದಿನಲ್ಲಿರಲು ನನಗೆ ರಾಜಿಯಿಲ್ಲ.”

ಯುವತಿ ನಗುತ್ತಲೇ ಹೇಳಿದಳು.

ಆಗ ಖೋಜಾ ಭಕ್ಷಿಯು “ನಿಮ್ಮ ಇಷ್ಟದಂತೆ ಮಾಡುತ್ತೇನೆ. ಬನ್ನಿರಿ, ಬೀಬಿ ಸಾಹೇಬಾ” ಎಂದು ಯುವತಿಯನ್ನು ಜನಾನಾಕ್ಕೆ ಕರೆದುಕೊಂಡು ಹೋದನು.

ಖೋಜಾ ಹಿಂದಿರುಗಿದಾಗ ಕರೀಂಖಾನನು ಕೊಟಡಿಯ ಕಿಟಕಿಯ ಹತ್ತಿರ ನಿಂತು ಹೊರಗಿನ ದೃಶ್ಯವನ್ನು ನೋಡುತ್ತಿದ್ದನು. ಮಹಲಿನ ಎರಡನೆ ಅಂತಸ್ತಿನಲ್ಲಿ ಕೊಟಡಿಯಿದ್ದದ್ದು. ಅದರ ಪಾರ್ಶ್ವದಲ್ಲಿ ಒಂದು ದೊಡ್ಡ ವರಾಂಡಾ. ಅದನ್ನು ದಾಟಿ ಜನಾನಾಕ್ಕೆ ಹೋಗಬೇಕು.

“ನನ್ನ ಬೀಬಿ ತುಂಬಾ ತುಂಟಿ ಹೆಂಗಸು, ಖೋಜಾಸಾಬ್. ಅವಳು ಮಾತಾಡುವುದೇ ಹಾಗೆ. ನಾವು ಮೂರು ಹೊತ್ತೂ ಜಗಳವಾಡುತ್ತಿದ್ದರೂ ನಮ್ಮ “ಉಲ್ಫತ್” ಮಾತ್ರ ಸಮುದ್ರವಂತೆ ಯಾವಾಗಲೂ ಉಕ್ಕಿಹರಿಯುತ್ತದೆ” ಎಂದು ಹೇಳಿ ಕರೀಂಖಾನನು ಹತ್ತು ರೂಪಾಯಿಯ ಎರಡು ನೋಟುಗಳನ್ನು ತೆಗೆದು ಖೋಜಾಗೆ ಕೊಟ್ಟನು.

ಖೋಜಾ ಅದನ್ನು ತೆಗೆದುಕೊಂಡು ಕಿಸೆಯಲ್ಲಿ ಭದ್ರಪಡಿಸಿ “ಮಹಲಿನಲ್ಲಿ ನಿಮ್ಮ ಆರಾಮಕ್ಕೆ ಬೇಕಾದ ಅನುಕೂಲ ಮಾಡಿಕೊಡುತ್ತೇನೆ, ಹುಜೂರ್” ಎಂದು ವಿನಯದಿಂದ ಹೇಳಿದನು.

“ನನಗೆ ಮತ್ತಾವ ಅನುಕೂಲವೂ ಬೇಡ. ನನ್ನ ಬೀಬಿಯ ಉಲ್ಫತ್ ಇಳಿತವನ್ನು ನೋಡಿದ್ದೀಯೆ. ರಾತ್ರಿ ಆದಂತೆ ಅದು ಏರುತ್ತ ಹೋಗಿ ಸರಿ ರಾತ್ರಿಗೆ ಶಿಖರ ಮುಟ್ಟುತ್ತದೆ. ವಿರಹ ತಡೆಯಲಾರದೆ ನನ್ನನ್ನು ನೋಡಲು ಅಪೇಕ್ಷಿಸುತ್ತಾಳೆ. ಆಗ ಅವಳನ್ನು ಇಲ್ಲಿಗೆ ಕರತಂದು ಬಿಟ್ಟರೆ ಇನ್ನೆರಡು ನೋಟು ಕೊಡುತ್ತೇನೆ”

ಎಂದನು ಕರೀಂಖಾನ್.

ಖೋಜಾ ಹಾಗೆಯೇ ಮಾಡುವುದಾಗಿ ಒಪ್ಪಿಕೊಂಡನು.

ಕರೀಂಖಾನ್ ಮತ್ತು ಪ್ಯಾರೀಬಾನೂ ನಮಗೆ ಪರಿಚಿತರಾದ ಕಾಮೇಶ ಚೌದುರಿ ಮತ್ತು ಪ್ರಮೀಳಾ ಎಂಬುದನ್ನು ವಾಚಕರು ಈ ಮೊದಲೇ ಊಹಿಸಿರ ಬಹುದು.



# ಹದಿಮೂರನೆಯ ಪರಿಚ್ಛೇದ

ಗುಲಾಬ್‌ಜಾನ್ ಸುಲ್ತಾನನ ಜನಾನೆಯ ಸರ್ವಾಧಿಕಾರಿಣಿ. ಸುಲ್ತಾನನ ಒಂಭತ್ತು ಮಂದಿ ಪತ್ನಿಯರು, ಹದಿನೆಂಟು ಮಂದಿ ಉಪಪತ್ನಿಯರು, ಆಗಾಗ ಅತಿಥಿಗಳಾಗಿ ಬರುತ್ತಿದ್ದ ನರ್ತಕಿ ನಾಯಕಿಸಿಯರು ಇವರೆಲ್ಲರ ವ್ಯವಸ್ಥೆ, ಸತ್ಕಾರ, ಮೇಲ್ವಿಚಾರಣೆಗಳ ಭಾರ ಅವಳ ಮೇಲಿತ್ತು. ಸುಲ್ತಾನನಿಗೆ ಅವಳು ಸಂಬಂಧ ದಲ್ಲಿ ಅತ್ತೆಯೂ, ಪ್ರೌಢ ವಯಸ್ಸಿನವಳೂ ಆಗಿದ್ದದ್ದರಿಂದ ಎಲ್ಲರೂ ಅವಳನ್ನು ಬೇಗಂ ಎಂದು ಕರೆಯುತ್ತಿದ್ದರು.

ಖೋಜಾ ಪ್ರಮೀಳೆಯನ್ನು ಒಳಗೆ ಕರೆದುಕೊಂಡು ಹೋಗಿ ಗುಲಾಬ್ ಜಾನಳ ವಶಕ್ಕೊಪ್ಪಿಸಿದನು. ಪೂರ್ವ ಪರಿಚಿತೆಯಂತೆ ಪ್ರಮೀಳಾ "ಚೆನ್ನಾಗಿ ದ್ದೀಯಾ ಅತ್ತೆ?" ಎಂದು ಮಾತಾಡಿಸಿದಳು.

"ಯಾರೇ ನೀನು ನನ್ನ ಹೊಸ ಸೊಸೆ?"

"ಇನ್ನೂ ಸೊಸೆಯಾಗಿಲ್ಲ, ಅತ್ತೆ. ಆಗಬೇಕೆಂದು ಬಂದಿದ್ದೇನೆ"

ಪ್ರಮೀಳೆ ನಗುತ್ತ ಉತ್ತರ ಕೊಟ್ಟಳು.

"ನಿನ್ನ ಹೆಸರೇನು ?"—ಗುಲಾಬ್‌ಜಾನ್ ಸುಮ್ಮಾನದಿಂದ ಪ್ರಶ್ನಿಸಿದಳು.

"ಪ್ಯಾರೀಬಾನು"

"ಹಿಂದೆ ಯಾವಾಗಲಾದರೂ ಇಲ್ಲಿಗೆ ಬಂದಿದ್ದೀಯಾ ?

"ಈ ಪರಿಸ್ತಾನ್ ಅಪೇಕ್ಷಿಸಿದ ಮಾತ್ರಕ್ಕೆ ಕೈಗೆ ಸಿಲುಕುವುದೇ ಅಮ್ಮಾಜಾನ್. ಇಷ್ಟುದಿನದಿಂದ ಪ್ರಯತ್ನಿಸಿ ಈಗ ಬಂದೆ."

"ಸಂಗಡ ಯಾರಿದ್ದಾರೆ ?"

"ಹೇಸರ ಕತ್ತೆಯೊಂದನ್ನು ತಂದಿದ್ದೆ. ಮಹಲ್ ಹೊರಗಿನ ಮೈದಾನದಲ್ಲಿ ಹುಲ್ಲು ಮೇಯಲು ಬಿಟ್ಟಿದ್ದೇನೆ."

"ನಿನ್ನ ಕತ್ತೆ ಕುದುರೆಗಳನ್ನು ನೀನೇ ನೋಡಿಕೊಳ್ಳಬೇಕು, ತಾಯಿ. ಯಾರಾದರೂ ಹೊಡೆದುಕೊಂಡು ಹೋದರೆ ನಾವು ಜವಾಬ್ದಾರರಲ್ಲ."

"ಆ ಭಯವಿಲ್ಲ ಅತ್ತೆ. ಆ ಒಕ್ಕಣ್ಣಿನ, ಕುಂಟುಕಾಲು ಮುದಿಕತ್ತೆಯನ್ನು ಯಾರೂ ಹಿಡಿಯುವುದಿಲ್ಲ."

"ಸುಲ್ತಾನರನ್ನು ನೋಡಿದ್ದೆಯಾ ?"

"ಪರ್ದಾ ಅಡ್ಡವಿದ್ದದ್ದರಿಂದ ನಾನು ಸುಲ್ತಾನರನ್ನು ನೋಡಲಿಲ್ಲ. ಸುಲ್ತಾನರು ನನ್ನನ್ನು ನೋಡಿದರು."

"ಅದಕ್ಕೆ ಪರದೆ ಅಡ್ಡ ಬರಲಿಲ್ಲವೇನೇ ಹುಚ್ಚು ಹುಡುಗಿ !"

ಗುಲಾಬ್‌ಜಾನ್ ನಗುತ್ತಾ ನುಡಿದಳು.

"ನೋಡಲೆಂದೇ ಪರದೆಯನ್ನು ಸ್ವಲ್ಪ ಓರೆ ಮಾಡಿದೆ."

ಗುಲಾಬ್‌ಜಾನ್ ಖೋಜಾನ ಕಡೆ ತಿರುಗಿ "ಖಾವಂದರೇನು ಹುಕುಂ ಮಾಡಿದರು ?" ಎಂದು ಕೇಳಿದಳು.

"ಏನೂ ಹೇಳಲಿಲ್ಲ, ಅಮ್ಮಾಜಾನ್"

" ಹೋಗಿ ಕೇಳಿಕೊಂಡು ಬಾ! ಕತ್ತೆ!"

ಖೋಜಾ ಒಂದೇ ಉಸುರಿಗೆ ಪುನಃ ಸುಲ್ತಾನನ ಬಳಿಗೆ ಓಡಿದನು. ಖೋಜನಿಗಾದ ಭಂಗವನ್ನು ನೋಡಿ ನಗುತ್ತಾ ಪ್ರಮೀಳಾ "ಬಾಂದಿಯರಿಗೆ ಆಜ್ಞೆ ಮಾಡು ಅತ್ತೆ. ನನಗೆ ಹೊಸ ಸೀರೆ ಕುಪ್ಪಸಗಳು, ಅತ್ತರ್, ಸುರ್ಮಾ, ಒಂದೆರಡು ಭಾರಿ ಒಡವೆಗಳು ಬೇಕು" ಎಂದಳು.

"ಸುಲ್ತಾನರ ಹುಕುಂ ಆಗಲಿ. ಆ ಮೇಲೆ ಸ್ನಾನ ಮಾಡಸಿ ಬೇಕಾದ್ದೆಲ್ಲಾ ಕೊಡುತ್ತೇನೆ"

"ಸ್ನಾನ! ನಾನೇನು ಹಿಂದುವೇ ದಿನಕ್ಕೆ ಮೂರು ಸಾರಿ ಸ್ನಾನ ಮಾಡುವುದಕ್ಕೆ. ಆ ಕಾಫರ್ ಪದ್ಧತಿಗಳು ನನಗೆ ಸರಿಬೀಳುವುದಿಲ್ಲ."

ಸುಲ್ತಾನನ ಪ್ರೇಮದ ಈ ಹೊಸ ಅಭ್ಯರ್ಥಿನಿಯ ಜಾತ್ಯಭಿಮಾನವನ್ನು ಕಂಡು ಗುಲಾಬ್‌ಜಾನಳಿಗೆ ಆನಂದವಾಯಿತು. ಪ್ರಮೀಳೆಯ ತಲೆಯನ್ನು ಸವರಿ ನಟಿಕೆ ಮುರಿದು ಹೇಳಿದಳು.

"ಈ ದಿನ ಬೇರೊಬ್ಬ ಗಿರಾಕಿಯ ಸರದಿ. ಅವಳಿಗಾಗಿ ಕಾರು ಕಳುಹಿಸಿದೆ. ಒಂದು ದಿನ ಮನಸ್ಸು ಬಿಗಿ ಹಿಡಿದಿರು, ಪ್ಯಾರಿ. ನಾಳೆ ನಿನ್ನ ಸರದಿ ಏರ್ಪಡಿಸುತ್ತೇನೆ."

"ನಾಳೆ! ಇಪ್ಪತ್ತು ನಾಲ್ಕು ಗಂಟೆಗಳ ಕಾಲ! ನೀನು ನನ್ನ ವಯಸ್ಸಿನವಳಾಗಿದ್ದಿದ್ದರೆ ಬಯಸಿದ ಹೃದಯಕ್ಕೆ ಅದೆಂತಹ ದೀರ್ಘಕಾಲವೆಂಬುದನ್ನು ತಿಳಿಯುತ್ತಿದ್ದೆ, ಅತ್ತೆ."

"ಇದೇನೇ ಈ ಯಮ ಆತುರ! ನಿನ್ನಂತಹ ಬೇಷರಂ ಹುಡುಗಿಯನ್ನು ನಾನು ಯಾವಾಗಲೂ ನೋಡಿಲ್ಲ."

"ನಿನ್ನ ಹತ್ತಿರ ಷರಂ ಏನು ಅತ್ತೆ? ಮನಸ್ಸಿಗೆ ಬಂದದ್ದನ್ನು ಮುಚ್ಚುಮರೆಯಿಲ್ಲದೆ ಹೇಳಿದೆ. ಯಾರು ಆ ಹೆಂಗಸು, ಈ ದಿನದ ರಂಭೆ?"

"ಅವಳೊಬ್ಬ ಸಿಂಧಿ! ಏನು ಮೆಚ್ಚಿದ್ದಾರೋ ಸುಲ್ತಾನರು! ಮೂರು ಹೊತ್ತು ಅಳುತ್ತಿರುತ್ತಾಳೆ."

ಈ ಮಾತು ಕೇಳಿ ಪ್ರಮೀಳೆಯ ಕಿವಿಗಳು ನೆಟ್ಟಗಾದವು. ಚಂದ್ರಲೇಖಾ ವಿಷಯವನ್ನೇ ಹೇಳುತ್ತಿರಬಹುದೇ ಗುಲಾಬ್‌ಜಾನ್? ಮಹಲಿನ ಯಾವುದೋ ಭಾಗದಲ್ಲಿ ಅವಳು ಬಂದಿಯಾಗಿರಬೇಕು. ಅದನ್ನು ಪತ್ತೆ ಹಚ್ಚಿ ಸುಲ್ತಾನನ ದಾನವೀ ಹಸ್ತದಿಂದ ಅವಳನ್ನು ಉದ್ಧರಿಸಲು ಇನ್ನು ಕೆಲವೇ ಗಂಟೆಗಳ ಕಾಲ ಉಳಿದಿದೆಯೆಂದು ಪ್ರಮೀಳಾ ತಿಳಿದಳು. ಸ್ವಲ್ಪ ಹೊತ್ತು ಸುಮ್ಮನಿದ್ದು "ಈಗ ಆ ಹುಡುಗಿ ಎಲ್ಲಿದ್ದಾಳೆ?" ಎಂದು ಗುಲಾಬ್‌ಜಾನಳನ್ನು ಕೇಳಿದಳು.

"ಪಕ್ಕದ ಗ್ರಾಮದಲ್ಲಿ ಹಿಂದುವೊಬ್ಬನ ಮನೆಯಲ್ಲಿ ಅವಳನ್ನು ಬಿಟ್ಟಿತ್ತು. ಕರೆತರಲು ಜನ ಹೋಗಿದ್ದಾರೆ."

ಗುಲಾಬ್‌ಜಾನ್ ಸಹಜವಾಗಿ ಉತ್ತರ ಕೊಟ್ಟಳು.

"ಅವಳು ಬಂದಮೇಲೆ ನೋಡಬಹುದೇ ಅತ್ತೆ?"

"ನೀನೇಕೆ ಅವಳನ್ನು ನೋಡಬೇಕು?"

"ಒಂದು ಸಾರಿ ಬುದ್ಧಿ ಹೇಳುತ್ತೇನೆ. ನಗುವಂತೆ ಮಾಡುತ್ತೇನೆ. ಅಳುಮೋರೆ ಹೆಂಗಸೊಬ್ಬಳನ್ನು ಸುಲ್ತಾನನ ಹತ್ತಿರ ಕಳುಹಿಸುವುದು ನಿನಗೆ ಗೌರವವೇ ಯೋಚಿಸು ಅತ್ತೆ?"

"ಅದಕ್ಕೆ ನಾನೇನು ಮಾಡುವುದು? ರಾಜಕೋಟೆಯಲ್ಲಿ ತಂದೆಯ ಹತ್ತಿರಿದ್ದ ಹುಡುಗಿಯನ್ನು ಅಪಹರಿಸಿಕೊಂಡು ಬಂದರೆ ಅಳದೆ ಇರುತ್ತಾಳೆಯೇ?"

ಅಪಹೃತಳು ಚಂದ್ರಲೇಖಾ ಎಂದು ಪ್ರಮೀಳೆಗೆ ಸ್ಥಿರವಾಯಿತು. "ನಾನು ಅಂತಹವರನ್ನು ಬಹಳ ನೋಡಿದ್ದೇನೆ ಅತ್ತೆ. ಅವರನ್ನು ದಾರಿಗೆ ತರಲು ಒಂದು ವಿಧಾನವಿದೆ" ಎಂದು ಅರ್ಥಗರ್ಭಿತವಾಗಿ ಹೇಳಿದಳು.

ಈ ಮಾತುಗಳು ನಡೆಯುತ್ತಿದ್ದಂತೆ ಖೋಜಾ ಪುನಃ ಓಡಿಬಂದು "ಸುಲ್ತಾನರ ಸಂಗಡ ಜನರಿದ್ದಾರೆ. ಮಾತಾಡಲು ಅವಕಾಶವಾಗಲಿಲ್ಲ. ಆ ಹಿಂದೂ ಹುಡುಗಿಯನ್ನು ಕರೆದುಕೊಂಡು ಕಾರು ಹಿಂದಿರುಗಿತು" ಎಂದು ಹೇಳಿದ.

ಗುಲಾಬ್‌ಜಾನ್ ಇಬ್ಬರು ಬಾಂದಿಯರನ್ನು ಖೋಜನ ಸಂಗಡ ಕಳುಹಿಸಿ "ಆ ಹುಡುಗಿಯನ್ನು ಒಳಗೆ ಕರೆತಂದು ಪ್ರತ್ಯೇಕ ಕೊಟಡಿಯಲ್ಲಿ ಕುಳ್ಳಿರಿಸುವಂತೆ ಹೇಳಿದಳು." ಖೋಜಾ ಹೋದ ಮೇಲೆ ಪ್ರಮೀಳಾ "ನೀನು ಯೋಚಿಸಬೇಡ ಅತ್ತೆ. ಆ ಹುಡುಗಿ ಜವಾಬ್ದಾರಿ ನನಗಿರಲಿ. ಸ್ವಲ್ಪ ಹೊತ್ತಿಗೆ ಅವಳು ಹೇಗೆ ಬದಲಾಯಿಸುವಳೆಂಬುದನ್ನು ನೀನೇ ನೋಡುವೆ" ಎಂದಳು.

"ತಮ್ಮ ಹುಕುಂ ಹೊರತಾಗಿ ಆ ಹುಡುಗಿಯನ್ನು ಯಾರೂ ನೋಡಕೂಡದೆಂದು ಸುಲ್ತಾನರು ಹೇಳಿದ್ದಾರೆ."

ಪ್ರಮೀಳಾ ನಕ್ಕು "ಸುಲ್ತಾನರ ಹುಕುಂ ಮಹಲಿನ ಹೊರಗೆ. ಜನಾನಾದಲ್ಲಿ ಬೇಗಂ ಗುಲಾಬ್‌ಜಾನರ ಹುಕುಂ" ಎಂದು ನೆಲ ಮುಟ್ಟಿ ಸಲಾಂ ಮಾಡಿದಳು.

"ಅಂದ ಮಾತ್ರಕ್ಕೆ ನಾವು ಎಚ್ಚರದಿಂದಿರಬೇಡವೇ?"

"ಅದಕ್ಕಾಗಿಯೇ ನಾನು ಹೇಳುವುದು, ಅತ್ತೆ. ನಿನ್ನ ಚಾತುರ್ಯದಿಂದ ಮೂರು ಹೊತ್ತು ಅಳುತ್ತಿದ್ದ ಹುಡುಗಿ ನಗುವಂತಾದಳು ಎಂದು ತಿಳಿದರೆ ಸುಲ್ತಾನರಿಗೆ ಸಂತೋಷವಾಗುವುದಿಲ್ಲವೇ? ನಾನು ಆ ಮಾರ್ಪಾಟು ಮಾಡುತ್ತೇನೆ—ಕೆಲಸ ನನ್ನದು, ಹೆಸರು ನಿಮ್ಮದು"

ಕೊನೆಗೆ ಗುಲಾಬ್‌ಜಾನ್ ಒಪ್ಪಿಕೊಂಡಳು. ಬಾಂದಿಯನ್ನು ಕರೆದು ಅಪಹೃತ ಹಿಂದೂ ಹುಡುಗಿಯಿದ್ದ ಕೊಟ್ಟಡಿಗೆ ಪ್ರಮೀಳಾ ಅರ್ಥಾತ್ ಪ್ಯಾರೀಜಾನಳನ್ನು ಕರೆದುಕೊಂಡು ಹೋಗುವಂತೆ ಆಜ್ಞೆ ಮಾಡಿದಳು. ಬಾಂದಿ ಪ್ರಮೀಳೆಯನ್ನು ಸಂಗಡ ಕರೆದುಕೊಂಡು ಜನಾನಾ ಮಹಲಿನ ಹಿಂಭಾಗಕ್ಕೆ ಹೋದಳು. ಅಲ್ಲೊಂದು ಸಾಮಾನ್ಯ ಕೊಟಡಿಯ ಬಾಗಿಲು ತೆರೆದು "ಒಳಗಿದ್ದಾಳೆ. ಹೋಗಿ ಮಾತಾಡಬಹುದು. ನೀವು ಬರುವವರೆಗೆ ನಾನು ಬಾಗಿಲ ಹೊರಗೆ ಕಾವಲಿರಬೇಕೆಂದು ಬೇಗಮರ ಆಜ್ಞೆ" ಎಂದಳು.

ಪ್ರಮೀಳಾ ಕೊಟಡಿಯನ್ನು ಪ್ರವೇಶಿಸಿದಳು. ಒಳಗೆ ದೀಪ ಮಸಕಾಗಿ ಉರಿಯುತ್ತಿತ್ತು. ನೆಲದ ಮೇಲೆ ಹೆಂಗಸೊಬ್ಬಳು ತಲೆಯ ಮೇಲೆ ಕೈಯಿಟ್ಟು

ಯೋಚಿಸುತ್ತ ಕುಳಿತಿದ್ದಳು. ಪ್ರಮೀಳಾ ಸಮೀಪಕ್ಕೆ ಹೋಗಿ "ನಿನ್ನ ಹೆಸರೇನು ತಂಗಿ?" ಎಂದು ಹೇಳಿದಳು.

ಕುಳಿತಿದ್ದವಳು ಉತ್ತರಕೊಡಲಿಲ್ಲ. ತಲೆಯೆತ್ತಿ ಪ್ರಮೀಳೆಯ ಮುಖವನ್ನು ನೋಡಿ "ಬೇಡಿಕೊಳ್ಳುತ್ತೇನೆ. ಈ ಚಿತ್ರ ಹಿಂಸೆಯ ಬದಲು ನನ್ನನ್ನು ಒಂದೇ ಸಾರಿಗೆ ಕೊಂದುಬಿಡಿ" ಎಂದಳು.

ಪ್ರಮೀಳಾ ಹೆಂಗಸಿನ ಕೈಯನ್ನು ಹಿಡಿದು "ನೀನು ಹೇಳದಿದ್ದರೂ ನಿನ್ನ ಹೆಸರು ನನಗೆ ಗೊತ್ತಿದೆ. ನಿನ್ನ ಸಂಗಡ ಮಾತಾಡಬೇಕಾದ ಕೆಲವು ವಿಷಯಗಳಿವೆ. ಆ ಕಿಟಕಿಯ ಹತ್ತಿರ ಬಂದರೆ ಹೇಳುತ್ತೇನೆ" ಎಂದಳು.

ಪ್ರಮೀಳೆಯ ಹಸ್ತ ಸ್ಪರ್ಶದಿಂದ ಹೆಂಗಸಿನ ಮನಸ್ಸಿನಲ್ಲಿ ವಿಶ್ವಾಸ ಹುಟ್ಟಿತು. ಅವಳು ಎದ್ದು ನಿಂತು ಪ್ರಮೀಳೆಯ ಸಂಗಡ ಕೊಟಡಿಯ ಹಿಂಭಾಗದಲ್ಲಿ ಕಿಟಕಿಯಿದ್ದ ಸ್ಥಳಕ್ಕೆ ಹೋದಳು. ಪ್ರಮೀಳೆ ಕಿಟಕಿಯಿಂದ ಹೊರಗೆ ನೋಡಿದಳು. ಸಣ್ಣ ಅಂಗಣ, ಅದರ ಪಾರ್ಶ್ವದಲ್ಲಿ ಕತ್ತಲಿನಲ್ಲಿ ಬೃಹದಾಕಾರವಾಗಿ ಕಾಣುತ್ತಿದ್ದ ಪ್ರಾಕಾರದ ಗೋಡೆ ಮತ್ತು ಬುರುಜುಗಳು, ಕಿಟಕಿಯಿಂದ ಅಂಗಣ ಸುಮಾರು ೧೫-೨೦ ಅಡಿ ಕೆಳಗಿದ್ದಂತೆ ಕಂಡಿತು. ಆ ಕಡೆಯಿಂದ ಯಾರೂ ಕಿಟಕಿಯ ಸಮೀಪಕ್ಕೆ ಬಂದು ಹೊಂಚಿ ಕೇಳುವ ಸಂಭವವಿರಲಿಲ್ಲ. ಕೊಟಡಿಯ ಬಾಗಿಲು ಕಿಟಕಿಯಿಂದ ಹತ್ತು ಅಡಿ ದೂರದಲ್ಲಿತ್ತು. ಸಣ್ಣ ದನಿಯಿಂದ ಮಾತಾಡಿದರೆ ಬಾಗಿಲಲ್ಲಿ ನಿಂತಿದ್ದ ಬಾಂದಿಗೆ ಕೇಳಿಸುತ್ತಿರಲಿಲ್ಲ. ಪ್ರಮೀಳಾ ಈ ವಿವರಗಳನ್ನು ಮೊದಲು ಗಮನಿಸಿ, ಅನಂತರ ಹೆಂಗಸಿನ ಕಡೆ ತಿರುಗಿ "ನಾನು ರಮಾನಂದರ ಕಡೆಯವಳು. ನಿಮ್ಮ ತಂದೆ ರಾಜಕೋಟೆಯಲ್ಲಿ ಸುರಕ್ಷಿತವಾಗಿದ್ದಾರೆ. ನಿನ್ನನ್ನು ರಕ್ಷಿಸುವುದಕ್ಕಾಗಿಯೇ ನಾನಿಲ್ಲಿಗೆ ಬಂದಿದ್ದೇನೆ. ನಾನು ಹೇಳಿದಂತೆ ಮಾಡಬೇಕು" ಎಂದಳು.

"ನಾನು ಯಾರೆಂದು ತಿಳಿದು ನೀವು ಮಾತಾಡುತ್ತಿದ್ದೀರಿ?"

ಹೆಂಗಸು ಎಚ್ಚರದಿಂದ ಉತ್ತರಕೊಟ್ಟಳು.

"ನೀನು ಚಂದ್ರಲೇಖಾ, ಕಿಷನ್‌ಚಂದನ ಮಗಳು. ನಿಮ್ಮ ತಂದೆಯಿಂದ ಎಲ್ಲ ವಿಷಯವನ್ನೂ ತಿಳಿದು ನಿನ್ನ ಸಹಾಯಕ್ಕಾಗಿ ನಾನು ಮತ್ತು ಒಬ್ಬ

ಪತ್ತೇದಾರ ವೇಷ ಬದಲಾಯಿಸಿಕೊಂಡು ಇಲ್ಲಿಗೆ ಬಂದಿದ್ದೇವೆ. ಪತ್ತೇದಾರ ಮಹಲಿನಲ್ಲಿ ಸುಲ್ತಾನರ ಅತಿಥಿಶಾಲೆಯಲ್ಲಿದ್ದಾನೆ. ನಾನು ಇಲ್ಲಿಂದ ನಿನ್ನನ್ನು ಕರೆದುಕೊಂಡು ಹೋಗಿ ಉಪಾಯದಿಂದ ಪತ್ತೇದಾರನ ಹತ್ತಿರ ಕಳುಹಿಸುತ್ತೇನೆ. ಆತನು ಇಲ್ಲಿಂದ ನಿನ್ನನ್ನು ಪಾರುಮಾಡುತ್ತಾನೆ."

"ಆ ಮೇಲೆ ನಿನ್ನ ಗತಿ ?"

"ಅದಕ್ಕಾಗಿ ನೀನು ಚಿಂತಿಸುವ ಅಗತ್ಯವಿಲ್ಲ. ಇಂತಹ ನಾಲ್ಕು ಮಂದಿ ಸುಲ್ತಾನರಿಗೆ ಮಣ್ಣು ಮುಕ್ಕಿಸಿ ಪಾರಾಗಬಲ್ಲೆ ನಾನು. ನಾವು ಹೆಚ್ಚು ಹೊತ್ತು ಮಾತಾಡುತ್ತಿದ್ದರೆ ದಾಸಿಗೆ ಸಂದೇಹವಾಗುತ್ತದೆ. ನಾನು ಹೇಳುವುದಕ್ಕೆ 'ಹಾ', 'ಹೂ' ಹೊರತಾಗಿ ನೀನು ಮತ್ತೇನೂ ಉತ್ತರ ಕೊಡಬೇಡ."

ಎಂದು ಹೇಳಿ ಪ್ರಮೀಳಾ ಬಾಗಿಲ ಹತ್ತಿರ ಬಂದು ಬಾಂದಿಯ ಸಂಗಡ "ಇವಳನ್ನು ಬೇಗಮರ ಬಿಡಾರಕ್ಕೆ ಕರೆದುಕೊಂಡು ಹೋಗುತ್ತೇನೆ. ಅದಕ್ಕೆ ಅವರ ಅಭ್ಯಂತರವೇನೂ ಇಲ್ಲತಾನೆ ?" ಎಂದಳು.

"ಹೆಂಗಸು ಒಪ್ಪುವುದಾದರೆ ನಿಮ್ಮ ಸಂಗಡ ಅವಳನ್ನೂ ಕರೆದುಕೊಂಡು ಬರುವಂತೆ ಬೇಗಂ ಸಾಹೇಬರು ಹೇಳಿದ್ದಾರೆ" ಎಂದಳು ಬಾಂದಿ.

"ಹಾಗಾದರೆ ನಡೆ" ಎಂದು ಹೇಳಿ ಹೆಂಗಸನ್ನು ಕರೆದುಕೊಂಡು ಪ್ರಮೀಳಾ ಬಾಂದಿಯ ಹಿಂದೆ ಹೊರಟಳು.

ಬೇಗಮಳು ಪ್ರಮೀಳೆಗಾಗಿ ನಿರೀಕ್ಷಿಸುತ್ತಿದ್ದಂತೆ ಕಂಡಿತು. ನೋಡುತ್ತಲೇ "ಈಗ ಏನು ಹೇಳುತ್ತಾಳೆ ಲೌಂಡಿ?" ಎಂದು ಪ್ರಶ್ನಿಸಿದಳು.

ಪ್ರಮೀಳಾ ಬೇಗಮಳನ್ನು ಪ್ರತ್ಯೇಕವಾಗಿ ಕರೆದು "ಅರ್ಧ ಮುಕ್ಕಾಲು ದಾರಿಗೆ ಬಂದಿದ್ದಾಳೆ. ಇಲ್ಲಿ ನಿಮ್ಮ ಜನರ ಒರಟುತನದಿಂದ ಬೆದರಿರುವಂತೆ ಕಾಣುತ್ತದೆ. ನನ್ನ ಕೊಟಡಿಯಲ್ಲಿ ಸ್ವಲ್ಪ ಕಾಲ ವಿಶ್ರಮಿಸಿಕೊಂಡರೆ ಸರಿ ಹೋಗುತ್ತಾಳೆ" ಎಂದು ಹೇಳಿದಳು.

ಬೇಗಮಳು ಸಂತುಷ್ಟಳಾದಂತೆ ಕಂಡಿತು. "ಈ ದಿನ ಸುಲ್ತಾನರು ಕೆಲವು ಮಂದಿ ಸ್ನೇಹಿತರನ್ನೂ ಊಟಕ್ಕೆ ಕರೆದಿದ್ದಾರೆ. ಅದನ್ನು ಮುಗಿಸಿ

ಕೊಂಡು ಅವರು ಜನಾನಾಕ್ಕೆ ಬರಬೇಕಾದರೆ ಇನ್ನು ಎರಡು ಗಂಟೆಯಾದರೂ ಆಗುತ್ತದೆ. ಅಷ್ಟರಲ್ಲಿ ನೀನು ಅವಳನ್ನು ಸಿದ್ಧಳಾಗಿ ಮಾಡಿರಬೇಕು" ಎಂದು ಹೇಳಿ ಜನಾನದ ಅತಿಥಿಶಾಲೆಯಲ್ಲಿ ಸುಸಜ್ಜಿತವಾದ ಕೊಟಡಿಯೊಂದನ್ನು ಪ್ಯಾರೀ ಜಾನಳಿಗೆ ಬಿಟ್ಟುಕೊಡುವಂತೆ ಬಾಂದಿಗೆ ಆಜ್ಞೆ ಮಾಡಿದಳು. ಬಾಂದಿ ಅದರಂತೆ ಪ್ರಮೀಳೆಯನ್ನೂ ಹೆಂಗಸನ್ನೂ ಕರೆದುಕೊಂಡು ಹೋದಳು.

ಮಹಲಿನ ಆ ಕೊಟಡಿ ಇತರ ಕೊಟಡಿಗಳಿಗಿಂತ ಚನ್ನಾಗಿದ್ದಂತೆ ಪ್ರಮೀಳೆಗೆ ಕಂಡಿತು. ಕುರ್ಚಿ, ಸೋಫಾಗಳು, ಟೇಬಲ್, ಮಂಚ ಮುಂತಾದ ಉಪಕರಣಗಳಿಂದ ಕೊಟಡಿ ಅತ್ಯಾಧುನಿಕವಾಗಿ ಅಲಂಕೃತವಾಗಿತ್ತು. ವಿದ್ಯುದ್ದೀಪದ ಬೆಳಕಿನಲ್ಲಿ ಪ್ರಮೀಳಾ ಮೊದಲ ಸಾರಿ ಹೆಂಗಸಿನ ಮುಖವನ್ನು ದಿಟ್ಟಿಸಿ ನೋಡಿದಳು. ವಯುಸ್ಸು ೨೦-೨೨ ಕ್ಕೆ ಮೀರಿರಲಿಲ್ಲ. ಫೋಟೋದಲ್ಲಿದ್ದಂತೆ ಅಪೂರ್ವ ರೂಪವತಿಯಾಗಿ ಕಂಡಳು. ಅಪಹೃತಳಾದ ಮೇಲೆ ಭಯ ಮತ್ತು ಚಿಂತೆಯಿಂದ ಮುಖ ಕಂಗೆಟ್ಟಿತ್ತು,

ದಾಸಿಯರು ತಟ್ಟೆಯಲ್ಲಿ ಇಬ್ಬರಿಗೆ ಬೇಕಾದಷ್ಟು ರೊಟ್ಟಿ, ಹಾಲು, ಹಣ್ಣು ಮುಂತಾದ ಆಹಾರ ಪದಾರ್ಥಗಳನ್ನೂ ಹೊಸ ಉಡುಪುಗಳನ್ನೂ ತಂದುಕೊಟ್ಟರು. ಪ್ರಮೀಳಾ ಕೊಟಡಿಯ ಬಾಗಿಲುಹಾಕಿ "ಏನಾದರೂ ಆಹಾರ ತೆಗೆದುಕೊಳ್ಳುವೆಯಾ?" ಎಂದು ಕೇಳಿದಳು.

"ಈ ಮನೆಯಲ್ಲಿ ಏನೂ ತೆಗೆದುಕೊಳ್ಳಬಾರದೆಂದು ಮಾಡಿದ್ದೇನೆ. ನನ್ನನ್ನು ಹಳ್ಳಿಯಲ್ಲಿ ಬಂಧನದಲ್ಲಿಟ್ಟಿದ್ದರು. ಒಳ್ಳೆಜನ. ಬರುವಾಗ ಅವರ ಮನೆಯಲ್ಲಿ ಫಲಾಹಾರ ಮಾಡಿಬಂದೆ"—ಎಂದಳು ಚಂದ್ರಲೇಖಾ.

"ನಿನಗೆ ಬೇಡದಿದ್ದರೆ ಬಿಡು. ನನಗೆ ಹಸಿವಾಗುತ್ತಿದೆ" ಎಂದು ಪ್ರಮೀಳಾ ತಟ್ಟೆಯಲ್ಲಿದ್ದ ಪದಾರ್ಥಗಳನ್ನು ತಿಂದು ದಾಸಿಯನ್ನು ಕರೆದು "ಖೋಜಾಸಾಹೇಬರೆಲ್ಲಿ? ನಾನವರನ್ನು ನೋಡಬೇಕಾಗಿದೆ" ಎಂದಳು.

ಖೋಜಾಭಕ್ಷನನ್ನು ಕರೆತರಲು ದಾಸಿ ಹೋದಮೇಲೆ ಪ್ರಮೀಳಾ ಚಂದ್ರಲೇಖೆಯ ಸಂಗಡ "ನೀನು ಹಾಸಿಗೆಯಲ್ಲಿ ಹೊದ್ದುಕೊಂಡು ಮಲಗಿಬಿಡು. ನಾನು ಖೋಜಾ ಮುಖಾಂತರ ನಿನ್ನನ್ನು ಪತ್ತೇದಾರನ ಹತ್ತಿರ ಕಳುಹಿಸಲು

ಏರ್ಪಡಿಸುತ್ತೇನೆ" ಎಂದು ಹೇಳಿ ಮೇಜಿನ ಮೇಲಿದ್ದ ಸಣ್ಣ ದೀಪವೊಂದರ ಹೊರತಾಗಿ ಉಳಿದ ದೀಪಗಳನ್ನು ಆರಿಸಿ ಖೋಜಾಗಾಗಿ ಕಾಯುತ್ತ ಕುಳಿತುಕೊಂಡಳು.

ಸ್ವಲ್ಪ ಹೊತ್ತಿನ ಮೇಲೆ ಖೋಜಾ ಬಾಗಿಲ ಹತ್ತಿರ ಬಂದು "ಬಾಯಿ ಸಾಹೇಬ್" ಎಂದು ಕೂಗಿದನು. ಪ್ರಮೀಳೆ ಹೊರಗೆ ಹೋಗಿ "ನಿಮ್ಮಿಂದ ಒಂದು ಕೆಲಸವಾಗಬೇಕಾಗಿದೆ ಭಕ್ಷಿಯವರೆ" ಎಂದಳು.

"ಸಿದ್ಧವಾಗಿದ್ದೇನೆ, ಬಾಯಿ ಸಾಹೇಬಾ"

"ನಾನು ನಮ್ಮ ಯಜಮಾನರನ್ನು ನೋಡಬೇಕಾಗಿದೆ."

"ಅದು ಸಾಧ್ಯವಲ್ಲ. ಇಷ್ಟು ಹೊತ್ತಿನಲ್ಲಿ ಜನಾನಾದಿಂದ ಯಾರನ್ನೂ ಹೊರಗೆ ಬಿಡುವುದಿಲ್ಲ."

"ನನಗೆ ತಿಳಿದಿದೆ. ಅದಕ್ಕಾಗಿಯೇ ನಿಮ್ಮನ್ನು ಕರೆಸಿದ್ದು. ನಾನು ಏನೋ ಯೋಚನೆ ಮಾಡಿ ಇಲ್ಲಿಗೆ ಬಂದೆ. ಆದರೆ ಅದು ಸರಿಹೋಗಲಿಲ್ಲ. ನಾಳಿನವರೆಗೆ ಕಾಯಬೇಕಾಗಿದೆ. ಈಗ ನೀವು ಅನುಗ್ರಹಿಸದೆ ಹೋದರೆ ಈ ರಾತ್ರಿಯನ್ನು ನಾನು ಒಬ್ಬಂಟಿಗಳಾಗಿ ಕಳೆಯಬೇಕಾಗುತ್ತದೆ. ಅದು ನನಗೆ ಅಭ್ಯಾಸವಿಲ್ಲ."

ಪ್ರಮೀಳೆಯ ಮಾತು ಕೇಳಿ ಖೋಜಾಭಕ್ಷಿಗೆ ನಗುಬಂತು. ಎಂತಹ ವಿಚಿತ್ರ ಜೀವಿಗಳು ಈ ಹೆಂಗಸರು! ಕರೀಂಖಾನ್ ಕೊಟ್ಟಿದ್ದ ನೋಟುಗಳು ಇನ್ನೂ ಜೇಬಿನಲ್ಲಿದ್ದವು. ಅವನು ತನ್ನ ಪತ್ನಿಯ "ಉಲ್ಫತ್" ವಿಚಾರದಲ್ಲಿ ಹೇಳಿದ್ದ ಮಾತುಗಳು ನೆನಪಿಗೆ ಬಂದವು. "ನಿಮ್ಮ ಮರದ್ ಮೇಲಿನ ದೋಸ್ತಿಯಿಂದ ಒಪ್ಪಿಕೊಳ್ಳುತ್ತೇನೆ, ಬಾಯಿ ಸಾಹೇಬಾ. ನಾನು ಜನಾನಾದಲ್ಲಿ ಗಸ್ತು ಮುಗಿಸಿಕೊಂಡು ಇನ್ನು ಹತ್ತು ನಿಮಿಷದಲ್ಲಿ ಇಲ್ಲಿಗೆ ಬರುತ್ತೇನೆ. ಅಷ್ಟು ಹೊತ್ತಿಗೆ ನೀವು ಬುರ್ಖಾದಿಂದ ಮೈ ಮುಚ್ಚಿಕೊಂಡು ಸದ್ದು ಮಾಡದೆ ನಿಂತಿದ್ದರೆ ಹೊರಗೆ ಕರೆದುಕೊಂಡು ಹೋಗುತ್ತೇನೆ" ಎಂದು ಹೇಳಿ ಹೊರಟನು.

ಪ್ರಮೀಳಾ ಒಳಗೆ ಬಂದು ಚಂದ್ರಲೇಖೆಯನ್ನೆಬ್ಬಿಸಿ "ಮುಸ್ಲಿಂ ಹೆಂಗಸರಂತೆ ನಿನಗೆ ಕಾಲಿನ ತನಕ ಬುರ್ಖಾ ಹಾಕುತ್ತೇನೆ. ನೀನು ಬಾಗಿಲ ಹತ್ತಿರ

ನಿಂತಿದ್ದರೆ ಸ್ವಲ್ಪ ಹೊತ್ತಿಗೆ ಖೋಜಾಭಕ್ಷಿ ಬಂದು ಜನಾನಾದಿಂದ ಹೊರಗೆ ಕರೆದುಕೊಂಡು ಹೋಗಿ ಪತ್ತೇದಾರನಿರುವ ಸ್ಥಳ ತಲಪಿಸುತ್ತಾನೆ. ಬುರ್ಖಾ ಹಾಕಿಕೊಂಡು ನಾನೇ ಕಾದಿರುವನೆಂದು ಖೋಜಾನ ನಂಬಿಕೆ. ನೀನು ಮಾತಾಡದೆ ಎಚ್ಚರದಿಂದಿರಬೇಕು. ಪತ್ತೇದಾರನಿಗೆ ಒಂದು ಕಾಗದ ಬರೆದು ಕೊಡುತ್ತೇನೆ. ಅದನ್ನು ಅವನ ಕೈಗೆ ಕೊಡು ಎಂದು ಹೇಳಿ, ಪತ್ರ ಬರೆದು ಕೊಟ್ಟಳು. ಚಂದ್ರಲೇಖೆಗೆ ಬುರ್ಖಾ ತೊಡಿಸಿ ಬಾಗಿಲ ಹತ್ತಿರ ನಿಲ್ಲಿಸಿದಳು. ಜನಾನಾವಾಸಿನಿಯರು ತಮ್ಮ ತಮ್ಮ ಕೊಟಡಿಗಳಲ್ಲಿ ಊಟೋಪಚಾರಗಳಲ್ಲಿ ನಿರತರಾಗಿದ್ದುದರಿಂದ ಅಂಗಣ ನಿರ್ಜನವಾಗಿತ್ತು. ಖೋಜಾಭಕ್ಷಿಯು ಗಸ್ತಿನ ಸಮಯವೆಂದು ತಿಳಿದು ದಾಸದಾಸಿಯರು ಕಣ್ಮರೆಯಾಗಿದ್ದರು.

ಮೊದಲೆ ಗೊತ್ತಾಗಿದ್ದಂತೆ ಖೋಜಾ ಬಾಗಿಲ ಹತ್ತಿರ ನಿಂತಿದ್ದ ಬುರ್ಖಾ ಧಾರಿಣಿಯನ್ನು ಪ್ಯಾರೀಜಾನ್ ಅರ್ಥಾತ್ ಪ್ರಮೀಳೆಯೆಂದೇ ತಿಳಿದು ಕೈಸನ್ನೆ ಮಾಡಿ ಹಿಂದೆ ಕರೆದುಕೊಂಡು ಜನಾನಾದಿಂದ ಹೊರಗೆ ಹೋದನು.



## ಹದಿನಾಲ್ಕನೆಯ ಪರಿಚ್ಛೇದ

ಪ್ರಮೀಳೆ ಹೋದ ನಂತರ ಕರೀಂಖಾನ್ ಉರುಫ್ ಕಾಮೇಶ್ ಚೌದುರಿಯು ಕಿಟಕಿಯ ಹತ್ತಿರ ಕುಳಿತು ಅಂಗಣದಲ್ಲಿ ನಡೆಯುವುದನ್ನು ನೋಡುತ್ತಿದ್ದನು. ನಾಲ್ಕೈದು ಜನರ ಸಣ್ಣ ಗುಂಪುಗಳಾಗಿ ಅನೇಕರು ಸುಲ್ತಾನನ್ನು ನೋಡಲು ಬಂದರು. ಒಂದೆರಡು ಕಾರುಗಳೂ ಬಂದವು. ಈ ಸಂದಣಿಯ ಕಾರಣವೇನು ? ಮಹಲಿನಲ್ಲಿ ಏನೋ ಒಳಸಂಚು ನಡೆಯುತ್ತಿದೆಯೆಂದು ಖಂಡಿತಮಾಡಿಕೊಂಡನು. ಅದರಿಂದ ಸುಲ್ತಾನನ ಮನಸ್ಸು ಇನ್ನು ಕೆಲವು ಗಂಟೆಗಳಾದರೂ ಜನಾನಾ ಕಡೆ ತಿರುಗುವುದಿಲ್ಲವೆಂದೂ, ಜನಾನಾದಲ್ಲಿ ಪ್ರಮೀಳಾ

ನಡೆಸುತ್ತಿರುವ ಕಾರ್ಯಭಾಗಕ್ಕೆ ಅದು ಅನುಕೂಲವೇ ಎಂದೂ ಭಾವಿಸಿದನು. ಅಷ್ಟರಲ್ಲಿ ಸೇವಕನೊಬ್ಬನು ಅಲ್ಲಿಗೆ ಬಂದು "ಸುಲ್ತಾನರು ನಿಮ್ಮನ್ನು ಕರೆದು ಕೊಂಡು ಬರಲು ಕಳುಹಿಸಿದ್ದಾರೆ" ಎಂದು ಹೇಳಿದನು.

ಸುಲ್ತಾನನ ಸಭಾಂಗಣದಲ್ಲಿ ಏನು ನಡೆಯುತ್ತಿದೆಯೆಂಬುದನ್ನು ತಿಳಿಯಲು ಅವಕಾಶವಾಯಿತೆಂದು ಕಾಮೇಶ್ ಸೇವಕನ ಹಿಂದೆ ಹೋದನು. ಸಭಾಂಗಣ ದಲ್ಲಿ ಸುಮಾರು ಐವತ್ತು ಮಂದಿಯಿದ್ದರು. ಅವರಲ್ಲಿ ಒಬ್ಬಿಬ್ಬರು ಮುಲ್ಲಾಗಳು ಉಳಿದವರು ಸೌರಾಷ್ಟ್ರದ ಮುಸ್ಲಿಂ ಜಮೀನ್‌ದಾರರು ಮತ್ತು ವರ್ತಕ ಪ್ರತಿನಿಧಿ ಗಳಂತೆ ಕಂಡಿತು. "ಇವರೊಬ್ಬ ಪೋಲೀಸ್ ಅಧಿಕಾರಿ. ಕರೀಂಖಾ಼ ಎಂದು ಹೆಸರು. ಬಾಬರ್‌ವಾಡ್ ಸಂಸ್ಥಾನದಿಂದ ನಮ್ಮ ಸಹಾಯಕ್ಕೆ ಬಂದಿದ್ದಾರೆ" ಎಂದು ಸಭಿಕರಿಗೆ ಪರಿಚಯ ಮಾಡಿಸಿ, ಸುಲ್ತಾನನು "ಈ ಗೊಂದು ಮುಷ್ಕಿಲ್ ಬಂದಿದೆ. ಅದಕ್ಕಾಗಿ ನಿಮ್ಮನ್ನು ಕರೆಸಬೇಕಾಯಿತು." ಎಂದು ಕಾಮೇಶನಿಗೆ ಹೇಳಿದನು.

"ಸುಲ್ತಾನರಿರುವಾಗ ಮುಷ್ಕಿಲ್ ಎಂತಾದ್ದು! ಕಾಫರರು ಮತ್ತೇನು ಸಂಚು ಹೂಡಿದ್ದಾರೆ?"

ಎಂದು ಕಾಮೇಶ್ ಉತ್ತರ ಕೊಟ್ಟನು.

ಸುಲ್ತಾನನು ಹೇಳಿದನು—"ಜುನಾಗಡ್ ಕಾಂಗ್ರೆಸ್ ವಿಚಾರ ನಿನಗೆ ತಿಳಿದಿರಬಹುದು, ಕರೀಂಖಾ಼. ಈಗ ಅವರೊಂದು ಚಲುವಳಿ ಹೂಡಿದ್ದಾರೆ. ಜುನಾಗಡ್ ಭಾರತಕ್ಕೆ ಸೇರಬೇಕಂತೆ. ಇಲ್ಲವೇ ದಂಗೆಯೆದ್ದು ಸರಕಾರ ವಶಪಡಿಸಿಕೊಳ್ಳುವರಂತೆ"

"ಅದೇನು ಸುಲಭವಾದ ಕಾರ್ಯವೇ ಸುಲ್ತಾನರೇ! ನಾವೆಲ್ಲಾ ಇರುವಾಗ!"

"ನಿಮ್ಮ ಧೈರ್ಯ ಇವರಿಗಿದ್ದಿದ್ದರೆ ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ಸೌರಾಷ್ಟ್ರವನ್ನೇ ಪಾಕಿಸ್ಥಾನಕ್ಕೆ ಸೇರಿಸಬಹುದಾಗಿತ್ತು. ಕರೀಂಖಾ಼, ಆ ಗಾಂಧಿ ಟೋಪಿಗಳನ್ನು ನೋಡಿ ಇವರು ಹೆದರಿ ಬಂದಿದ್ದಾರೆ."

ಸುಲ್ತಾನನ ಈ ಮೂದಲಿಕೆಯ ಮಾತುಗಳನ್ನು ಕೇಳಿ ಸಭಿಕರಲ್ಲೊಬ್ಬನು "ನಾವು ಗಾಂಧಿ ಟೋಪಿಗಳಿಗೆ ಹೆದರತಕ್ಕವರೇ ಸುಲ್ತಾನ್ ಸಾಹೇಬ್? ಅವರ ಹಿಂದೆ ಭಾರತದ ಪೋಲೀಸ್ ಮತ್ತು ಸೈನ್ಯ ಪಡೆಗಳು ಬರುತ್ತಿದೆಯೆಂದು ಕೇಳಿ ನಿಮ್ಮ ಸಲಹೆಗಾಗಿ ಇಲ್ಲಿಗೆ ಬಂದೆವು" ಎಂದು ಹೇಳಿದನು.

ಕಾಮೇಶ್ ಸಭಿಕರ ಕಡೆ ತಿರುಗಿ ಹೇಳಿದನು—"ಸುಲ್ತಾನರು ಬೆರಳೆತ್ತಿದರೆ ಸಾಕು, ಪಾಕೀಸ್ಥಾನ್ ಸೈನ್ಯ ಭಾರತದ ಮೇಲೆ ಬೀಳುತ್ತದೆ. ಜುನಾಗಡ್ ಒಂದೇ ಏನು? ಸೌರಾಷ್ಟ್ರದ ಎಲ್ಲ ಸಂಸ್ಥಾನಗಳನ್ನೂ ಪಾಕಿಸ್ಥಾನಕ್ಕೆ ಸೇರಿಸಿಕೊಳ್ಳಬಹುದು. ಹಿಂದೂಗಳ ಜಮೀನು, ಆಸ್ತಿಪಾಸ್ತಿಗಳನ್ನು ಲೂಟಿ ಮಾಡಿ ಮುಸ್ಲಿಮರಿಗೆ ಹಂಚಬಹುದು. ಸುಲ್ತಾನರು ಅನುಮತಿ ಕೊಟ್ಟರೆ ನಾನು ಜುನಾಗಡದ ಒಂದೊಂದು ಹಳ್ಳಿಯಲ್ಲಿಯೂ ಕಾಂಗ್ರೆಸ್ ವಿರುದ್ಧ ಮುಸ್ಲಿಂ ವಾಲಂಟೇರ್ ದಳಗಳನ್ನು ರಚಿಸುತ್ತೇನೆ. ಅವರಿಗೆ ಆಯುಧಗಳನ್ನು ಒದಗಿಸುವ ಜವಾಬ್ದಾರಿ ಪಾಕಿಸ್ಥಾನ್ ಸರ್ಕಾರ ವಹಿಸಿಕೊಳ್ಳುತ್ತದೆ. ಸುಲ್ತಾನರು ಅದಕ್ಕೇರ್ಪಡಿಸಿದರೆ ನಮ್ಮ ಸೈನ್ಯ ಸಿದ್ಧವಾಗಿದೆ"

ಕಾಮೇಶನ ವಾದ ಸಭಿಕರಿಗೆ ಸೂಕ್ತವಾಗಿ ಕಂಡಿತು. "ವಹ್ವಾ! ವಹ್ವಾ!" ಎಂಬ ಮೆಚ್ಚಿಗೆಯ ಸಂತೋಷೋದ್ಗಾರಗಳೆದ್ದವು...."ಪಾಕಿಸ್ಥಾನ್ ಜಿಂದಾಬಾದ್" ಜಯ ಘೋಷದೊಡನೆ ಸಭೆ ಮುಕ್ತಾಯವಾಗುತ್ತಿದ್ದಂತೆ ಸುಲ್ತಾನನು "ರಾತ್ರಿ ಬಹಳ ಹೊತ್ತಾಗಿದೆ. ನಿಮ್ಮೆಲ್ಲರಿಗೂ ಭೋಜನಕ್ಕೆ ಏರ್ಪಡಿಸಿದ್ದೇನೆ. ನಿಮ್ಮಲ್ಲನೇಕರು ದೂರದಿಂದ ಬಂದಿದ್ದೀರಿ. ರಾತ್ರಿ ಇಲ್ಲಿಯೇ ಇದ್ದು ಬೆಳಿಗ್ಗೆ ಹೋಗಬಹುದು" ಎಂದು ಹೇಳಿದನು.

ಸಭಿಕರು "ಸುಲ್ತಾನ್ ಜಿಂದಾಬಾದ್" ಎಂದು ಉತ್ತರ ಕೊಟ್ಟರು. ಕಾಮೇಶನು ಸಭಾಂಗಣವನ್ನು ಬಿಡುವ ಮೊದಲು ಸುಲ್ತಾನರಿಗೆ ಸಲಾಂ ಮಾಡಿ "ಖಾವಂದರ ದಯದಿಂದ ಪಾಕಿಸ್ಥಾನಕ್ಕೆ ಉಪಯುಕ್ತನಾಗುವ ಈ ಅವಕಾಶ ನನಗೆ ದೊರಕಿತು. ಅದಕ್ಕಾಗಿ ದೇವರನ್ನು ವಂದಿಸುತ್ತೇನೆ" ಎಂದನು.

"ನಿನ್ನ ಸಹಾಯವಿಲ್ಲದಿದ್ದರೆ ನಾನು ತೊಂದರೆಯಲ್ಲಿ ಬೀಳುತ್ತಿದ್ದೆ, ಕರೀಂಖಾನ್. ನೀನು ಹೇಗೂ ಪೋಲೀಸ್ ಅಧಿಕಾರಿ, ಸರಕಾರಿ ಪತ್ರಗಳನ್ನು ಬರೆಯುವ ವಿಧಾನ ನಿನಗೆ ತಿಳಿದಿರಬೇಕು. ಇಲ್ಲಿ ನಡೆದ ವಿಷಯಗಳನ್ನು

ಕುರಿತು ಜುನಾಗಡ್ ನವಾಬರಿಗೆ ಒಂದು ಕಾಗದ ಬರೆ. ನಾಳೆ ನನ್ನ ಸ್ನೇಹಿತರೊಬ್ಬರು ಪೋರ್ ಬಂದರಲ್ಲಿ ಹಡಗು ಹತ್ತಿ ಕರಾಚಿಗೆ ಹೋಗುತ್ತಾರೆ. ಅವರ ಸಂಗಡ ಕಳುಹಿಸುತ್ತೇನೆ."

ಎಂದು ಸುಲ್ತಾನ್ ಉತ್ತರ ಕೊಟ್ಟನು.

"ಪಾಕಿಸ್ಥಾನ್ ಸೈನ್ಯ ಯಾವಾಗ ಜುನಾಗಡಕ್ಕೆ ಬರುತ್ತದೆ?"

"ಅದಕ್ಕೆ ನಾನು ಏರ್ಪಡಿಸಿದ್ದೇನೆ. ನನ್ನ ಸ್ನೇಹಿತರೊಬ್ಬರಿದ್ದಾರೆ ನವಾಬ್‌ಜಾದಾ ಯಾಕೂಬ್ ಎಂದು. ಜುನಾಗಡ್ ರಾಜ ಮನೆತನದ ಸಮೀಪ ಸಂಬಂಧ ಅವರು. ಪಾಕಿಸ್ಥಾನ್ ಸೈನ್ಯವನ್ನು ಜುನಾಗಡಕ್ಕೆ ತರಿಸುವ ಜವಾಬ್ದಾರಿಯನ್ನು ಅವರು ತಾವೇ ವಹಿಸಿಕೊಂಡಿದ್ದಾರೆ."

ಸುಲ್ತಾನನ ಅವಿವೇಕದ ವಿಶ್ವಾಸ ಕಂಡು ಕಾಮೇಶ್ ಮನಸ್ಸಿನಲ್ಲಿಯೇ ನಕ್ಕನು. ಪ್ರಕಟವಾಗಿ "ನವಾಬ್ ಜಾದರು ಜವಾಬ್ದಾರಿ ವಹಿಸಿಕೊಂಡ ಮೇಲೆ ನಾವು ನಿಶ್ಚಿಂತರಾಗಿರಬಹುದು. ನಾನವರನ್ನು ರಾಜಕೋಟೆಯಲ್ಲಿ ನೋಡಿದ್ದೇನೆ. ಅವರ ಶಕ್ತಿ ಸಾಹಸಗಳ ಪರಿಚಯವಿದೆ" ಎಂದನು.

ಸುಲ್ತಾನನಿಂದ ಬೀಳ್ಕೊಂಡು ಕಾಮೇಶ್ ತನ್ನ ಬಿಡಾರಕ್ಕೆ ಬಂದಾಗ ಬಾಗಿಲ ಹಿಂದೆ ಮರೆಯಲ್ಲಿ ಯಾರೋ ನಿಂತಿದ್ದಂತೆ ಕಂಡಿತು. ವಿದ್ಯುದ್ದೀಪದ ಗುಂಡಿಯನ್ನೊತ್ತಿ ನೋಡಿದನು. ಬುರ್ಕಾ ಧರಿಸಿದ್ದ ಹೆಣ್ಣು. "ಯಾರು ನೀನು?" ಎಂದು ಪ್ರಶ್ನಿಸಿದನು.

ಹೆಂಗಸು ಉತ್ತರ ಕೊಡಲಿಲ್ಲ, ಪತ್ರವೊಂದನ್ನು ಕೊಟ್ಟಳು. ಕಾಮೇಶ್ ಓದಿದ—

ಬಾಬರ್‌ವಾಡ್ ದರೋಗ ಕರೀಂಖಾ ಮಹಾಶಯರಿಗೆ, ನಿಮ್ಮ ಉಲ್ಫತ್ತಿನ ಬಾಂದಿ ಪ್ಯಾರೀಬಾನು ಮಾಡುವ ಸಲಾಂ.

"ನಾವು ಹುಡುಕಿಕೊಂಡು ಬಂದ ಹಕ್ಕಿ ತಾನಾಗಿ ನನ್ನ ಕೈಗೆ ಸಿಕ್ಕಿತು. ಈ ಕಾಗದದ ಸಂಗಡ ಅದನ್ನು ನಿಮ್ಮ ಹತ್ತಿರ ಕಳುಹಿಸಿದ್ದೇನೆ. ಅದನ್ನು

ಸುರಕ್ಷಿತ ಸ್ಥಾನಕ್ಕೆ ಕರೆದೊಯ್ಯುವ ಭಾರ ಇನ್ನು ನಿಮಗೆ ಸೇರಿದ್ದು. ಕೂಡಲೆ ಅದಕ್ಕಾಗಿ ಏರ್ಪಡಿಸಿ.

"ನನ್ನ ವಿಚಾರ ನೀವು ಚಿಂತಿಸಬೇಕಾಗಿಲ್ಲ. ನಾನು ಸುಲ್ತಾನರನ್ನು ಕಂಡು ಬೇಹೂಷ್ ಆಗಿ ಹೋಗಿದ್ದೇನೆ. ಎರಡು ದಿನ ಇಲ್ಲಿದ್ದು ಬರುತ್ತೇನೆ.

ಇತಿ ಪ್ಯಾರೀಬಾನು.

ಕಾಮೇಶ್ ಹೆಂಗಸಿನ ಕಡೆ ತಿರುಗಿ "ಪ್ರಮೀಳಾ ಏನು ಹೇಳಿದಳು?" ಎಂದು ಕೇಳಿದನು.

ಹೆಂಗಸು ಹೇಳಿದಳು—"ಪತ್ತೆದಾರರು ನಿನ್ನ ರಕ್ಷಣೆಗೆ ಏರ್ಪಡಿಸುತ್ತಾರೆ. ನೀನು ಅವರು ಹೇಳಿದಂತೆ ಮಾಡು ಎಂದು ಹೇಳಿದಳು"

"ದೇವರು ನಿಮ್ಮ ತಂದೆ ಕಿಸನ್‌ಚಂದರ ಮೊರೆ ಕೇಳಿರಬೇಕು ಎಂದು ಕಾಣುತ್ತದೆ. ನಮ್ಮ ಪ್ರಯತ್ನ ಸಾಹಸಗಳೇನೂ ಇಲ್ಲದೆ ನೀನು ದೊರಕಿದೆ. ಪ್ರಮೀಳೆಯ ಸೀರೆ ಕುಪ್ಪುಸಗಳು ಈ ಟ್ರಂಕಿನಲ್ಲಿವೆ. ನೀನು ಅವುಗಳಲ್ಲಿ ಬೇಕಾದ್ದನ್ನು ತೆಗೆದು ಉಟ್ಟುಕೊ. ನಾನು ಹೊರಗೆ ಹೋಗಿ ಇಲ್ಲಿಂದ ಪಾರಾಗುವ ಏರ್ಪಾಟು ಮಾಡುತ್ತೇನೆ."

ಎಂದು ಹೇಳಿ ಕಾಮೇಶ್ ಕೊಟಡಿಯ ಬಾಗಿಲು ಮುಚ್ಚಿಕೊಂಡು ಮಹಲಿನ ಅಂಗಳಕ್ಕೆ ಹೋದನು. ಅಲ್ಲಿ ಕೆಲವು ಕಾರುಗಳಿದ್ದವೆಂದು ತಿಳಿಸಿದ್ದೇವೆ. ಡ್ರೈವರುಗಳು ಸಮೀಪದಲ್ಲಿ ಸಿಗರೇಟು ಸೇದುತ್ತಾ ನಿಂತಿದ್ದರು. ಕಾಮೇಶ್ ತನಗೆ ಚನ್ನಾಗಿ ಕಂಡ ಪಾಂಟಿಯಾಕ್ ಕಾರೊಂದರ ಮುಂದೆ ನಿಂತು. "ಇದರ ಮಾಲಿಕರಾರು?" ಎಂದು ಪ್ರಶ್ನಿಸಿದನು.

ಡ್ರೈವರೊಬ್ಬನು ಮುಂದೆ ಬಂದು ಸಲಾಂ ಮಾಡಿ "——ಜಮೀನ್ದಾರರದು ಸಾಹೇಬ್" ಎಂದು ಹೇಳಿದನು.

ಸಭೆಯಲ್ಲಿ ಕಾಮೇಶನ ವೀರಾವೇಶದ ಮಾತುಗಳು ಮಹಲಿನ ಸೇವಕರ, ಡ್ರೈವರುಗಳ ಆದರ ಗೌರವಗಳನ್ನು ಸಂಪಾದಿಸಿದ್ದವು. ಎಲ್ಲರ ಮುಖಗಳಲ್ಲಿ

ಕಣ್ಣುಗಳಲ್ಲಿ ಆ ಮೆಚ್ಚಿಕೆ ಎದ್ದು ಕಾಣುತ್ತಿತ್ತು. ಕಾಮೇಶ್ ಆ ಭರವಸೆಯಿಂದ ಹೇಳಿದನು.

"ನಾನು ಮತ್ತು ನನ್ನ ಬೀಬಿ ಸ್ವಲ್ಪ ದೂರ ಡ್ರೈವ್ ಹೋಗುತ್ತೇವೆ. ಕಾರು ಕೊಡುತ್ತೀಯಾ ?"

"ಬನ್ನಿ ಸಾಹೇಬ್" ಸಾರಥಿ ಸಂತೋಷದಿಂದ ಉತ್ತರ ಕೊಟ್ಟನು.

ಕಾಮೇಶ್ ಬೀಬಿಯನ್ನು ಕರೆದುಕೊಂಡು ಬರುವುದಾಗಿ ಹೇಳಿ ಮಹಲಿನಲ್ಲಿ ತನ್ನ ಬಿಡಾರಕ್ಕೆ ಹೋದಾಗ ಚಂದ್ರಲೇಖಾ ಬಟ್ಟೆ ಬದಲಾಯಿಸಿಕೊಂಡು ಸಿದ್ಧವಾಗಿದ್ದಳು.

"ನೀನು ಈಗ ಪ್ರಮೀಳೆಯಂತೆಯೇ ಧೈರ್ಯವಾಗಿ ನಡೆದುಕೊಳ್ಳಬೇಕು. ಇಲ್ಲಿಯ ಜನ ಅವಳು ನನ್ನ ಪತ್ನಿಯೆಂದೂ, ದಿಟ್ಟತನದ ಹೆಂಗಸೆಂದೂ ತಿಳಿದುಕೊಂಡಿದ್ದಾರೆ." ಎಂದು ಹೇಳಿ ಚಂದ್ರಲೇಖೆಯನ್ನು ಕರೆತಂದು ಕಾರಿನ ಹಿಂಭಾಗದ ಸೀಟಲ್ಲಿ ಕುಳ್ಳಿರಿಸಿ ಡ್ರೈವರನ ಸಂಗಡ "ನಾನೇ ಡ್ರೈವ್ ಮಾಡುತ್ತೇನೆ. ನೀನು ಪಕ್ಕದಲ್ಲಿ ಕುಳಿತಿರು" ಎಂದು ಹೇಳಿದನು.

ಕಾಮೇಶನ ದಕ್ಷತೆಯ ದೃಷ್ಟಿ ಮತ್ತು ಅಧಿಕಾರ ವಾಣಿಯಿಂದ ಮುಗ್ಧನಾಗಿದ್ದ ಡ್ರೈವರ್ ಮರು ಮಾತಾಡದೆ ಒಪ್ಪಿಕೊಂಡನು. ಕಾರು ಮಹಲಿನ ಮಹಾದ್ವಾರವನ್ನು ದಾಟಿ ಹೊರಗೆ ಹೋಯಿತು.

"ಎಲ್ಲಿಗೆ ಹೋಗೋಣ ? ಯಾವ ಕಡೆ ರಸ್ತೆ ಚನ್ನಾಗಿದೆ ?"

ಕಾಮೇಶ್ ಕೇಳಿದ ಡ್ರೈವರನ್ನು.

"ರಾಜಕೋಟ್ ರಸ್ತೆ ಚನ್ನಾಗಿದೆ ಸಾಹೇಬ್."

"ಇಲ್ಲಿಂದ ರಾಜಕೋಟೆ ಎಷ್ಟು ಮೈಲಿ ?"

"ಸುಮಾರು ನೂರು ಮೈಲಿಯಾಗಬಹುದು."

"ನಾವು ಹತ್ತು ಮೈಲಿ ಹೋಗಿ ಹಿಂದಿರುಗಿ ಬಿಡೋಣ."

ಕಾರು ರಾಜಕೋಟ್ ರಸ್ತೆಯಲ್ಲಿ ವೇಗವಾಗಿ ಹೊರಟಿತು. ಕೆಲವು ಮೈಲಿಗಳು ಹೋದ ಮೇಲೆ ಕಾಮೇಶ್ ಕಾರನ್ನು ನಿಲ್ಲಿಸಿ "ಇನ್ನು ಹಿಂದಕ್ಕೆ

ತಿರುಗೋಣವೇ ?" ಎಂದು ಡ್ರೈವರನ್ನು ಕೇಳಿದ. "ನಿಮ್ಮ ಇಚ್ಛೆ ಬಂದಂತೆ ಮಾಡಬಹುದು" ಎಂದು ಡ್ರೈವರನಿಂದ ಉತ್ತರಬಂದಿತು. "ಹಾಗಾದರೆ ಇಳಿದು ಸ್ವಲ್ಪ ತಿರುಗಾಡಿ ಬರೋಣ" ಎಂದು ಹೇಳಿ ಕಾಮೇಶ್ ಜೇಬಿಂದ ಪ್ಲಾಸ್ಕ ತೆಗೆದು ತಾನು ಕುಡಿದು ಡ್ರೈವರನಿಗೆ ಕೊಟ್ಟ. ಡ್ರೈವರ್ ಅದನ್ನು ಕುಡಿದ ಕೂಡಲೆ ಮತ್ತನಾದಂತೆ ಹಿಂದಕ್ಕೆ ಒರಗಿ ಪ್ರಜ್ಞೆ ತಪ್ಪಿದ. ಆಗ ಕಾಮೇಶ್ ಕಾರಿಂದ ಇಳಿದು ಡ್ರೈವರನನ್ನು ಇಳಿಸಿಕೊಂಡು ರಸ್ತೆಯ ಪಾರ್ಶ್ವದಲ್ಲಿ ಒಂದು ಮರದ ಹಿಂದೆ ಮಲಗಿಸಿದ.

"ಈಗ ನಾವೆಲ್ಲಿಗೆ ಹೋಗುವುದು ?" ಕಾರಿಗೆ ಹಿಂದಿರುಗಿದಾಗ ಚಂದ್ರ ಲೇಖಾ ಕೇಳಿದಳು.

"ದಾರಿಯಲ್ಲಿ ಪೋಲೀಸ್ ಠಾಣ್ಯವೊಂದು ಸಿಕ್ಕುವವರೆಗೆ. ಅಲ್ಲಿ ನಿನ್ನನ್ನು ಬಿಟ್ಟು ನಾನು ಪುನಃ ಸುಲ್ತಾನನ ಮಹಲಿಗೆ ಹಿಂದಿರುಗಬೇಕು."

"ಹೌದು. ನನ್ನ ಬದಲಿಗೆ ಪ್ರಮೀಳಾ ಕಷ್ಟದಲ್ಲಿದ್ದಾಳೆ. ನೀವು ಹಿಂದಿರುಗಿ ಅವಳನ್ನು ರಕ್ಷಿಸಬೇಕು."

"ಪ್ರಮೀಳಾ ಆತ್ಮರಕ್ಷಣೆಗೆ ಶಕ್ತಳು. ಆದರೂ ನಾನು ಅವಳ ಸಹಾಯಕ್ಕೆ ಹಿಂದಿರುಗುವುದು ಅಗತ್ಯ."

ಎಂದು ಹೇಳಿ ಕಾಮೇಶ್ ಕಾರು ಬಿಟ್ಟುಕೊಂಡು ರಾಜಕೋಟ್ ರಸ್ತೆ ಯಲ್ಲಿ ಹೊರಟ. ಕೆಲವು ಮೈಲಿ ಹೋದ ಮೇಲೆ ಒಂದು ದೊಡ್ಡ ನಗರ ಸಿಕ್ಕಿತು. ನಗರ ದ್ವಾರದಲ್ಲಿಯೇ ಪೆಟ್ರೋಲ್ ಬಂಕ್. ಕಾಮೇಶ್ ಕಾರಿಂದಿಳಿದು ಒಳಗೆ ಮಲಗಿದ್ದ ಗುಮಾಸ್ತನನ್ನು ಎಚ್ಚರಿಸಿ ಕೈಗೆ ಹತ್ತು ರೂಪಾಯಿ ನೋಟು ಕೊಟ್ಟು ಎರಡು ಗ್ಯಾಲನ್ ಪೆಟ್ರೋಲ್ ಹಾಕುವಂತೆ ಹೇಳಿದ.

ಅನಂತರ ಚಿಲ್ಲರೆಯನ್ನು ಭಕ್ಷೀಸಾಗಿ ಇಟ್ಟುಕೊಳ್ಳುವಂತೆ ಹೇಳಿ "ಇಲ್ಲಿಯ ಪೋಲೀಸ್ ಇನ್ಸ್‌ಪೆಕ್ಟರ್ ಹೆಸರೇನು ?" ಎಂದು ಪ್ರಶ್ನಿಸಿದ.

"ಸುಜನರಾಯ್ ಎಂದು. ಅಲ್ಲಿ ಬೆಳಕು ಕಾಣುತ್ತಿರುವ ಕಟ್ಟಡವೇ ಪೋಲೀಸ್ ಸ್ಟೇಷನ್. ಇನ್ಸ್‌ಪೆಕ್ಟರ್ ಸ್ಟೇಷನ್ನಿನಲ್ಲೇ ಇರುವಂತಿದೆ."

" ನಗರದಲ್ಲೇನಾದರೂ ವಿಶೇಷವಿದೆಯೇ ?"

" ಜುನಾಗಡ್ ಸಂಸ್ಥಾನ ಪಾಕಿಸ್ಥಾನಕ್ಕೆ ಸೇರಿದ್ದರ ವಿರುದ್ಧ ಕಾಂಗ್ರೆಸ್ ಚಲುವಳಿ ಪ್ರಾರಂಭಿಸಿದೆ. ಸಂಜೆ ಮೆರವಣಿಗೆ ಸಭೆಗಳು ನಡೆಯಿತು. ನಗರದಲ್ಲಿ ಪೋಲೀಸರ ಉಸ್ತುವಾರಿ ಹೆಚ್ಚಾಗಿದೆ."

ಕಾಮೇಶ್ ಕಾರನ್ನು ಬಿಟ್ಟುಕೊಂಡು ಪೋಲೀಸ್ ಸ್ಟೇಷನ್ನಿನ ಹತ್ತಿರ ನಿಲ್ಲಿಸಿದ. ಸಮಾಚಾರ ತಿಳಿಯಲು ಬಂದ ಕಾನ್ಸ್ಟೇಬಲನನ್ನು " ಇನ್ಸ್ಪೆಕ್ಟರ್ ಸುಜನರಾಯರನ್ನು ನೋಡಬೇಕು. ಅವರೆಲ್ಲಿದ್ದಾರೆ ?" ಎಂದು ಕೇಳಿದ.

" ಸ್ಟೇಷನ್ನಿನಲ್ಲೇ ಇದ್ದಾರೆ. ಬಂದು ನೋಡಬಹುದು."

ಕಾಮೇಶ್ ಚಂದ್ರಲೇಖೆಯನ್ನು ಕಾರಿಂದ ಇಳಿಸಿಕೊಂಡು ಸ್ಟೇಷನ್ನಿನ ಒಳಗೆ ಕರೆದುಕೊಂಡು ಹೋಗಿ ಪೋಲೀಸ್ ಅಧಿಕಾರಿಯ ಮುಂದೆ ನಿಲ್ಲಿಸಿ " ರಾಜಕೋಟೆಯಿಂದ ಅಪಹೃತಳಾದ ಕಿಷನ್‌ಚಂದನ ಮಗಳು ಈಕೆ. ಇವಳನ್ನು ಸುರಕ್ಷಿತವಾಗಿ ರಾಜಕೋಟೆಗೆ ಕಳುಹಿಸಲು ಏರ್ಪಡಿಸಬೇಕಾಗಿ ಕೋರುತ್ತೇನೆ " ಎಂದು ಹೇಳಿದ.

ಇನ್ಸ್ಪೆಕ್ಟರ್ ಆಶ್ಚರ್ಯದಿಂದ " ನೀವು ಯಾರು ?" ಎಂದು ಪ್ರಶ್ನಿಸಿದ.

" ನಾನು ಬೊಂಬಾಯಿನ ಪತ್ತೇದಾರ ಕಾಮೇಶ್ ಚೌದುರಿ. ಪ್ರಾಯಶಃ ನನ್ನ ಹೆಸರನ್ನು ನೀವು ಕೇಳಿರಲಾರಿರಿ. ನಾನು ಈ ಪ್ರಾಂತಕ್ಕೆ ಬಂದದ್ದು ಇದೇ ಮೊದಲ ಸಾರಿ."

ಅಧಿಕಾರಿ ಕಾಮೇಶನನ್ನೂ ಚಂದ್ರಲೇಖೆಯನ್ನೂ ಕುಳಿತುಕೊಳ್ಳುವಂತೆ ಹೇಳಿ ನಡೆದುದೆಲ್ಲವನ್ನೂ ಕೇಳಿ ತಿಳಿದುಕೊಂಡ. ಅನಂತರ ಹೇಳಿದ : " ನೋಡಿ ಮಿಸ್ಟರ್ ಚೌದುರಿ, ಸಧ್ಯದಲ್ಲಿ ನಾವು ಒಂದು ಇಬ್ಬಂದಿಗೆ ಸಿಕ್ಕಿಕೊಂಡಿದ್ದೇವೆ. ಜುನಾಗಡ್ ನವಾಬರು ಪಾಕಿಸ್ಥಾನಕ್ಕೆ ಸೇರಿದ್ದಾರೆ. ಪ್ರಜೆಗಳು ಅದರ ವಿರುದ್ಧ ಚಲುವಳಿ ನಡೆಸುತ್ತಿದ್ದಾರೆ. ನವಾಬರ ಗೈರ್ ಹಾಜರಿಯಲ್ಲಿ ದಿವಾನರು ಭಾರತ ಸರ್ಕಾರದೊಡನೆ ವ್ಯವಹಾರ ನಡೆಸುತ್ತಿದ್ದಾರೆ. ಪಾಕಿಸ್ಥಾನ್ ಸೈನ್ಯ ಜುನಾಗಡಕ್ಕೆ ಬರುವ ಸುದ್ದಿ ಜೋರೆ ಹರಡಿದೆ. ಈ ಪರಿಸ್ಥಿತಿಯಲ್ಲಿ ನಾಳೆ ಬೆಳಿಗ್ಗೆ ಏನಾಗುವುದೋ ಹೇಳುವುದು ಕಷ್ಟ. ಭಾರತದಿಂದ ಅಪಹೃತಳಾದ

ಕನ್ಯೆಯೊಬ್ಬಳ ಜವಾಬ್ದಾರಿಯನ್ನು ವಹಿಸಿಕೊಳ್ಳಲು ಈಗ ನಾನು ಸಿದ್ಧನಾಗಿಲ್ಲ. ಇಲ್ಲಿಂದ ೫ ಮೈಲಿ ದೂರದಲ್ಲಿ ಜುನಾಗಡ್ ಗಡಿಯಲ್ಲಿ ಭಾರತ ಸೈನ್ಯ ಶಿಬಿರವಿದೆ. ಅಲ್ಲಿಗೆ ನಿಮ್ಮನ್ನು ಸುರಕ್ಷಿತವಾಗಿ ಕಳುಹಿಸುತ್ತೇನೆ. ಆ ಮೇಲೆ ನೀವು ಇಷ್ಟ ಬಂದಂತೆ ಮಾಡಬಹುದು."

ಅಧಿಕಾರಿಯ ಸಲಹೆ ಕಾಮೇಶನಿಗೆ ಸೂಕ್ತವಾಗಿ ಕಂಡಿತು. ಅದರಂತೆ ಕಾನ್ಸ್ಟೇಬಲೊಬ್ಬನನ್ನು ಸಂಗಡ ಕುಳ್ಳಿರಿಸಿಕೊಂಡು ಭಾರತ ಸೈನ್ಯ ಶಿಬಿರದ ಕಡೆ ಹೊರಟ. ಸ್ವಲ್ಪ ಹೊತ್ತಿಗೆ ದೂರದಲ್ಲಿ ಸೈನ್ಯ ಶಿಬಿರದ ಬೆಳಕು ಕಂಡಿತು. ಕಾನ್ಸ್ಟೇಬಲ್ ಕಾರಿಂದಿಳಿದು "ನಾನು ಹಿಂದಿರುಗುತ್ತೇನೆ. ಇನ್ನೊಂದು ಫರ್ಲಾಂಗ್ ಹೋದರೆ ಶಿಬಿರದ ಮಹಾದ್ವಾರ ಸಿಕ್ಕುವುದು" ಎಂದು ಹೇಳಿ ಬಂದ ದಾರಿಯಲ್ಲಿ ಕಾಲ್ನಡೆಯಲ್ಲಿ ಹಿಂದಿರುಗಿದ.

ಕಾರು ಮಹಾದ್ವಾರದಿಂದ ನೂರು ಅಡಿ ದೂರದಲ್ಲಿದ್ದಾಗ ಸೆಂಟ್ರಿ ಕೂಗು ಹಾಕಿ ನಿಲ್ಲಿಸುವಂತೆ ಹೇಳಿದ.

ಕಾಮೇಶ್ ಕಾರನ್ನು ನಿಲ್ಲಿಸಿ ಘೋಷಿಸಿದ.

"ಜೈ ಭಾರತ್! ಹಿಂದೂಸ್ಥಾನ್ ಜಿಂದಾಬಾದ್!" ಎಂದು.



## ಹದಿನೈದನೆಯ ಪರಿಚ್ಛೇದ

ಸಭಾ ಮಂದಿರದಿಂದ ಸುಲ್ತಾನನು ಜನಾನಾಕ್ಕೆ ಬಂದಾಗ ಮದ್ಯಪಾನ ದಿಂದ ಮತ್ತನಾಗಿದ್ದನು. ಗುಲಾಬ್‌ಜಾನ್ ಅವನ ಕೈಹಿಡಿದು ಶಯನಗೃಹಕ್ಕೆ ಕರೆದುಕೊಂಡು ಹೋಗಿ ಮಂಚದ ಮೇಲೆ ಮಲಗಿಸಿ ಹೊರಗೆ ಹೋಗುತ್ತಿದ್ದಾಗ ಸುಲ್ತಾನನು ಅವಳ ಸೆರಗು ಹಿಡಿದು ನಿಲ್ಲಿಸಿ,

"ನನ್ನೊಬ್ಬನನ್ನೇ ಬಿಟ್ಟು ಹೋಗುತ್ತೀಯಾ, ಪ್ಯಾರಿ?" ಎಂದು ತೊಡಲುತ್ತಾ ನುಡಿದನು.

"ಇದೇನು ಹುಡುಗಾಟ. ನಾನು ನಿನ್ನ ಪ್ಯಾರಿಯಲ್ಲ, ಗುಲಾಬ್ ಜಾನ್" ಎಂದು ಗುಲಾಬ್ ಸೆರಗು ಬಿಡಿಸಿಕೊಳ್ಳಲು ಪ್ರಯತ್ನಿಸಿದಳು.

ಸುಲ್ತಾನನಿಗೆ ನಂಬಿಕೆಯಾಗಲಿಲ್ಲ. ಕೈಹಿಡಿದು ಹತ್ತಿರ ಸೆಳೆದುಕೊಂಡು ದೀಪದ ಬೆಳಕಿನಲ್ಲಿ ಮುಖ ನೋಡಿದ ಮೇಲೆ ಸೆರಗನ್ನು ಬಿಟ್ಟು "ನೀನಿಲ್ಲೇಕೆ ಬಂದೆ, ಲೌಂಡಿ! ವಯಸ್ಸಾದರೂ ಚಪಲ ತೀರಲಿಲ್ಲವೇ?" ಎಂದನು.

"ನೀನೀಗ ಮತ್ತನಾಗಿದ್ದಿ, ಸುಲ್ತಾನ್. ಇಲ್ಲವೇ ಸರಿಯಾಗಿ ಬುದ್ಧಿ ಕಲಿಸುತ್ತಿದ್ದೆ"

ಎಂದು ಗುಲಾಬ್‌ಜಾನ್ ಹೊರಟಳು.

"ಏಯ್! ಏಯ್! ಲೌಂಡಿ! ಎಲ್ಲಿ ನನ್ನ ಪ್ಯಾರಿ?"

ಸುಲ್ತಾನನು ಪುನಃ ಅರಚಿದನು.

"ಏಕೆ ಅರಚಿಕೊಳ್ಳುತ್ತಿ, ಕುತ್ತಾ! ಇಲ್ಲೆ ಇದ್ದಾಳೆ ಬರುತ್ತಾಳೆ" ಎಂದು ಹೇಳಿ ಗುಲಾಬ್‌ಜಾನ್ ಓಡಿದಳು.

"ಒಂದು ದಿನ ಯಾವ ಪ್ಯಾರಿಯೂ ಬರುವುದಿಲ್ಲ. ಆ ದಿನ ತೋರಿಸುತ್ತೇನೆ ಈ ಕುತ್ತಾ ಎಂತಹ ಷೇರ್ ಎನ್ನೋದನ್ನ. ನನ್ನನ್ನು ಕುತ್ತಾ ಎಂತ ಬೈಯುತ್ತಿಯಾ ಲೌ—ಲೌ—ಲೌಂಡಿ!"

ಎಂದು ಮುಂತಾಗಿ ಸುಲ್ತಾನನು ಅರಚುತ್ತಿದ್ದಂತೆ ಪ್ರಮೀಳಾ ಒಳಗೆ ಬಂದಳು.

ಸುಲ್ತಾನನ ಕಣ್ಣುಗಳು ಅರಳಿದವು. "ಯಾರು ನೀನು ಪ್ಯಾರಿ?" ಎಂದು ಕೇಳಿದನು.

"ಸುಮ್ಮನಿರಿ, ಸುಲ್ತಾನ್ ಸಾಹೇಬ್. ಬೇಗಂ ಕೇಳಿದರೆ ಏನು ಹೇಳುವರು?"

ಎನ್ನುತ್ತಾ ಪ್ರಮೀಳಾ, ಸಮೀಪಕ್ಕೆ ಬಂದು ಪಾರ್ಶ್ವದಲ್ಲಿದ್ದ ಮಧ್ಯದ ಬಟ್ಟಲನ್ನು ತೆಗೆದುಕೊಂಡಳು.

ಸುಲ್ತಾನನು ಉನ್ಮತ್ತನಂತೆ "ಷರಾಬ್! ಷರಾಬ್! ಬಟ್ಟಲಲ್ಲಿರುವುದು ಬೇಡ ಪ್ಯಾರಿ. ನಿನ್ನ ತುಟಿಗಳ ಷರಾಬ್ ಕೊಡು ನನಗೆ" ಎಂದು ಅರಚಿದನು.

"ಮೊದಲು ಈ ಷರಾಬ್ ಕುಡಿಯಿರಿ. ಆ ಮೇಲೆ ಅದರ ರುಚಿಯನ್ನೂ ನೋಡುವಿರಿ" ಎನುತ್ತಾ ಪ್ರಮೀಳಾ ಬಟ್ಟಲನ್ನು ಸುಲ್ತಾನನ ತುಟಿಗಳಿಗೆ ಹಿಡಿದಳು.

ಸುಲ್ತಾನನು ಪ್ರಮೀಳೆಯ ಕೈಯನ್ನು ಚುಂಬಿಸಿ ಒಂದೇ ಗುಟುಕಿಗೆ ಬಟ್ಟಲಲ್ಲಿದ್ದ ಮಧ್ಯವನ್ನು ಕುಡಿದು "ಪ್ಯಾರೀ, ನೀನು ಕರೀಂಖಾನನ ಔರತ್ ಅಲ್ಲವೇ?'' ಎಂದನು.

ಪ್ರಮೀಳಾ ತಲೆಯಾಡಿಸಿ ಪುನಃ ಬಟ್ಟಲಿಗೆ ಮಧ್ಯ ತುಂಬಿದಳು. ಕೈಯಲ್ಲಿದ್ದ ಪೊಟ್ಟಣದ ಪುಡಿಯನ್ನು ಮಧ್ಯಕ್ಕೆ ಸೇರಿಸಿದಳು. ಮತ್ತನಾಗಿದ್ದ ಸುಲ್ತಾನ್ ಅದನ್ನು ಗಮನಿಸಲಿಲ್ಲ.

"ಕರೀಂಖಾನನಿಗೆ ಚಕ್ಕರ್ ಕೊಟ್ಟು ನೀನು ಇಲ್ಲಿ ಹೇಗೆ ಬಂದೆ ಪ್ಯಾರಿ? ರಾಜಕೋಟೆಯ ಆ ಸಿಂಧಿ ಹುಡುಗಿಯೆಲ್ಲಿ?"

ಸುಲ್ತಾನನು ಪುನಃ ಕೇಳಿದನು.

"ಕೊಟಡಿಯಲ್ಲಿದ್ದಾಳೆ. ಬೇಕಾದರೆ ಅವಳನ್ನೇ ಕಳುಹಿಸುತ್ತೇನೆ" ಪ್ರಮೀಳೆಯೆಂದಳು.

"ಬೇಡ, ಬೇಡ ಪ್ಯಾರಿ! ಅವಳು ಅಲ್ಲೇ ಇರಲಿ. ನೀನು ಇಲ್ಲೇ ಇರು"

"ಹಾಗಾದರೆ ಈ ಷರಾಬ್ ಕುಡಿಯಿರಿ"

ಎಂದು ಪ್ರಮೀಳಾ ಬಟ್ಟಲನ್ನು ಸುಲ್ತಾನನಿಗೆ ಕೊಟ್ಟಳು.

ಸುಲ್ತಾನನ ಅಮಲು ಆಗಲೇ ಕೊನೆಯ ಅವಸ್ಥೆಗೆ ಬಂದಿತ್ತು. ಮಧ್ಯದಲ್ಲಿ ಅರ್ಥವನ್ನು ಕುಡಿಮ ಪ್ರಜ್ಞೆ ತಪ್ಪಿ ಮಲಗಿದನು. ಸುಲ್ತಾನನ Pass Out* ಇಷ್ಟೊಂದು ಸುಲಭವಾಗಿ ಮುಗಿಯುವುದೆಂದು ಪ್ರಮೀಳೆಯೂ ನಿರೀಕ್ಷಿಸಿರಲಿಲ್ಲ.

ಆದರೂ ಎಚ್ಚರಿಕೆಗಾಗಿ ಬಾಗಿಲು ಮುಚ್ಚಿ ಉಡಿಯಲ್ಲಿಟ್ಟಿದ್ದ ಹಗ್ಗದಿಂದ ಸುಲ್ತಾನನ ಕಾಲು ಕೈಗಳನ್ನು ಮಂಚಕ್ಕೆ ಬಿಗಿದು ಕಟ್ಟಿದಳು. ದೀಪಗಳನ್ನಾರಿಸಿ ಕುರ್ಚಿಯೊಂದನ್ನು ಕಿಟಕಿಯ ಹತ್ತಿರಕ್ಕೆ ಎಳೆದು ಕುಳಿತು ತಾನು ನಿರೀಕ್ಷಿಸಿದ್ದ ಯಾವುದೋ ಶಬ್ದಕ್ಕಾಗಿ ಎದುರು ನೋಡುತ್ತಿದ್ದಳು.

ಈ ರೀತಿ ಕೆಲವು ಗಂಟೆಗಳು ಕಳೆದವು. ಪ್ರಾತಃಕಾಲ ಸುಮಾರು ಮೂರುಗಂಟೆ ಸುಮಾರಲ್ಲಿ ಕೆಲವು ಲಾರಿಗಳು ಮಹಲಿನ ಮುಂದೆ ಬಂದು ನಿಂತ ಶಬ್ದ ಕೇಳಿಸಿತು. ಪ್ರತಿಕ್ಷಣದಲ್ಲಿ ಬೂಟ್ಸು ಧರಿಸಿದ ಅನೇಕರು ಲಾರಿಗಳಿಂದ ಧುಮುಕಿದ ಶಬ್ದ ಕೇಳಿಬಂತು. ಬೂಟ್ಸು ಕಾಲುಗಳ ಸಪ್ಪಳ ಕ್ರಮ ಕ್ರಮವಾಗಿ ಮಹಲಿನ ಎಲ್ಲಕಡೆ ವ್ಯಾಪಿಸಿತು.

ಕೆಲವು ನಿಮಿಷಗಳ ಮೇಲೆ ಅವಳು ಸುಲ್ತಾನನ ಶಯನಗೃಹದಿಂದ ಹೊರಗೆ ಬಂದಾಗ ಜನಾನಾ ಹೆಂಗಸರು, ಖೋಜಾಗಳು ಬೇಗಮಳನ್ನು ಸುತ್ತುಗಟ್ಟಿ ನಿಂತಿದ್ದರು. "ಏನಾಯಿತು, ಅತ್ತೆ ?" ಎಂದು ಪ್ರಮೀಳಾ ಬೇಗಮಳನ್ನು ಕೇಳಿದಳು.

"ಹಿಂದೂ ಮಿಲಿಟರಿ ಮಹಲನ್ನು ಹಿಡಿದರು."

ಖೋಜಾ ಭಕ್ಷಿ ನಡುಗುತ್ತ ಹೇಳಿದನು.

ಜನಾನಾ ವಾಸಿನಿಯರು ಅಳುವುದಕ್ಕೆ ಮೊದಲು ಮಾಡಿದರು. ಆಗ ಪ್ರಮೀಳೆ "ಭಯವೇನು ಬಂತು. ನಾನು ನೋಡಿಕೊಂಡು ಬರುತ್ತೇನೆ" ಎಂದು ಹೊರಗೆ ಹೋದಳು.

---

* ಮಧ್ಯಪಾನದಿಂದ ಉಂಟಾಗುವ ಅಮಲಿನ ಕೊನೆಯ ಅವಸ್ಥೆಗೆ Pass Out ಎಂದು ಸಂಕೇತ ನಾಮ. ಈ ಅವಸ್ಥೆಯಲ್ಲಿ ಪಾನೀಕನು ಪ್ರಜ್ಞೆ ತಪ್ಪಿ ನಿಶ್ಚೇಷ್ಟಿತನಾಗಿ ಬಿದ್ದು ಬಿಡುತ್ತಾನೆ.

ವಾಸ್ತವದಲ್ಲಿ ಏನು ನಡೆಯಿತೆಂಬುದನ್ನು ಈಗ ತಿಳಿಸುವುದು ಅಗತ್ಯ. ಕಾಮೇಶ್ ಚೌದುರಿ ಚಂದ್ರಲೇಖೆಯೊಡನೆ ಜುನಾಗಡ್ ಗಡಿಯಲ್ಲಿ ಭಾರತ ಸೈನ್ಯ ಶಿಬಿರವನ್ನು ತಲಪಿದಾಗ ರಾಜಕೋಟೆಯ ಕೆಲವು ಪೋಲೀಸ್ ಅಧಿಕಾರಿಗಳೂ ಶಿಬಿರದಲ್ಲಿದ್ದರು. ಕಾಮೇಶ್ ಕೂಡಲೆ ಪಠಾನ್‌ಕೋಟೆಯ ಸುಲ್ತಾನನ ಮೇಲೆ ಕನ್ಯಾಪಹಾರ ಮತ್ತು ಶೀಲಭಂಗ ಪ್ರಯತ್ನದ ದೂರು ಕೊಟ್ಟನು. ಕಿಷನ್‌ಚಂದನ ಮಗಳ ಅಪಹಾರದ ವಿಚಾರ ಪೋಲೀಸರಿಗೆ ಸ್ವಲ್ಪ ಮಟ್ಟಿಗೆ ತಿಳಿದಿತ್ತು. ಕಾಮೇಶ್ ಮತ್ತು ಚಂದ್ರಲೇಖೆಯಿಂದ ಮಹಲಿನ ಘಟನೆಗಳನ್ನು ಕೇಳಿದ ಮೇಲೆ ಪೋಲೀಸರು ಕೂಡಲೆ ಮಹಲನ್ನು ಆಕ್ರಮಣಮಾಡಿ ಸುಲ್ತಾನನನ್ನು ಬಂಧಿಸಲು ನಿರ್ಧರಿಸಿದರು. ಬಲಪ್ರಯೋಗದಿಂದ ಪ್ರತಿಭಟಿಸುವ ನಿರೀಕ್ಷೆಯಿದ್ದದ್ದರಿಂದ ಮಿಲಟರಿ ಸಹಾಯ ತೆಗೆದುಕೊಳ್ಳಲ್ಪಟ್ಟಿತು. ಈ ಏರ್ಪಾಟುಗಳು ಮುಗಿದು ಪೋಲೀಸ್ ಪಡೆ ಸುಲ್ತಾನನ ಮಹಲಿಗೆ ಬರುವುದಕ್ಕೆ ಕೆಲವು ಗಂಟೆಗಳಾದವು. ಕಾಮೇಶನೂ ಪಡೆಯ ಸಂಗಡಿದ್ದನೆಂಬುದನ್ನು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ.

ಪೋಲೀಸ್ ಮತ್ತು ಮಿಲಟರಿಯನ್ನು ನೋಡಿದ ಕೂಡಲೇ ಸುಲ್ತಾನನ ಕಡೆಯವರು ಭಾರತ ಸೈನ್ಯ ಜುನಾಗಡಕ್ಕೆ ಪ್ರವೇಶಿಸಿತೆಂದು ಭಾವಿಸಿ ಶರಣಾಗತರಾದರು. ವಾಸ್ತವದಲ್ಲಿ ಒಂದೆರಡು ಬಂದೂಕುಗಳ ಹೊರತಾಗಿ ಅವರಲ್ಲಿ ಮತ್ತಾವ ಆಯುಧವೂ ಇರಲಿಲ್ಲ. ಪ್ರತಿಭಟನೆ ಅನರ್ಥಕಾರಿಯೆಂದು ಅವರು ತಿಳಿದಿದ್ದರು. ಸುಲ್ತಾನನ ಸೇವಕವರ್ಗ ಮತ್ತು ಅತಿಥಿಗಳನ್ನು ಪ್ರತ್ಯೇಕಿಸಿ ಪೋಲೀಸ್ ಅಧಿಕಾರಿಗಳು ಅವರ ಊರು ವಿಳಾಸಗಳನ್ನು ಬರೆದುಕೊಳ್ಳುತ್ತಿದ್ದಂತೆ ಕಾಮೇಶ್ ಇಬ್ಬರು ಕಾನ್ಸ್ಟೇಬಲರನ್ನು ಕರೆದುಕೊಂಡು ಜನಾನಾ ಕಡೆ ಹೊರಟನು.

"ಸಂಗಡ ಮಿಲಟರಿಯವರಿದ್ದರೆ ಒಳ್ಳೆಯದಲ್ಲವೆ ಮಿ|| ಕಾಮೇಶ್ ?"

ಪೋಲೀಸ್ ಅಧಿಕಾರಿ ಹೇಳಿದ.

"ನನ್ನ ಏರ್ಪಾಡಿನಂತೆ ಕೆಲಸ ನಡೆದಿದ್ದರೆ ಇಷ್ಟು ಹೊತ್ತಿಗೆ ಸುಲ್ತಾನನು ಅಪ್ಸರೆಯರ ಲೋಕದಲ್ಲಿ ಕನಸು ಕಾಣುತ್ತಿರಬೇಕು. ಎಚ್ಚರಿಕೆಗಾಗಿ ಈ ಕಾನ್ಸ್ಟೇಬಲರನ್ನು ಕರೆದುಕೊಂಡು ಹೋಗುತ್ತಿದ್ದೇನೆ.''

ಎಂದು ಹೇಳಿ ಕಾಮೇಶ್ ಮಹಲಿನ ಒಳಭಾಗಕ್ಕೆ ಹೋದನು. ಪ್ರಮೀಳಾ ಬಾಗಿಲಲ್ಲಿಯೇ ಎದುರಿಗೆ ಬಂದಳು.

"ಈ ಪೋಲೀಸ್ ಅಧಿಕಾರಿಗಳಿಗೆ ಸ್ವಲ್ಪವೂ ಬುದ್ಧಿಯಿಲ್ಲ. ಇದು ಸುಲ್ತಾನರ ಜನಾನಾ, ಅದಬ್ಬಿನಿಂದ ನಡೆದುಕೊಳ್ಳಬೇಕು ಎಂಬ ತಿಳುವಳಿಕೆಯೂ ಬೇಡವೇ?"

ಕೃತಕ ಕೋಪದಿಂದ ಪ್ರಮೀಳಾ ಕಾಮೇಶನ ಮೇಲೆ ಕಟಾಕ್ಷ ಬಾಣವೊಂದನ್ನು ಬೀರಿ ಹೇಳಿದಳು.

"ಮಾಪ್ ಮಾಡಬೇಕು, ಬೇಗಂ ಸಾಹೇಬಾ! ಸುಲ್ತಾನರಿಗೆ ನಮ್ಮ ಸಲಾಂ ತಿಳಿಸಿ ಹೊರಟು ಹೋಗುತ್ತೇವೆ."

ಎಂದು ಕಾಮೇಶ್ ನಗೆಯ ದನಿಯಿಂದ ಉತ್ತರಕೊಟ್ಟ.

"ಸುಲ್ತಾನರು ಆ ಕೊಟಡಿಯಲ್ಲಿ ನಿದ್ದೆ ಮಾಡುತ್ತಿದ್ದಾರೆ"

ಎಂದು ಹೇಳಿ ಪ್ರಮೀಳಾ ಶಯನ ಗೃಹದ ಕಡೆ ಬೆರಳು ತೋರಿಸಿದಳು.

ಮಂಚದ ಮೇಲೆ ಸುಲ್ತಾನನ ಬಂಧನವನ್ನು ನೋಡಿ ಕಾನ್ಸ್ಟೇಬಲುಗಳಿಗೆ ನಗು ಬಂತು. ಕಟ್ಟುಗಳನ್ನು ಬಿಚ್ಚಿ, ಕೈಗಳಿಗೆ ಕೋಳಹಾಕಿ, ಎತ್ತಿಕೊಂಡು ಜನಾನದಿಂದ ಹೊರಗೆ ತಂದರು. ಕಾಮೇಶ್ ಮತ್ತು ಪ್ರಮೀಳಾ ನವವಿವಾಹಿತ ದಂಪತಿಗಳಂತೆ ಕೈಹಿಡಿದು ಠೀವಿಯಿಂದ ಹಿಂದೆ ಬರುತ್ತಿದ್ದರು. ಜನಾನಾ ವಾಸಿಗಳು ತಮ್ಮ ತಮ್ಮ ಕೊಟಡಿಯ ಒಳಗಡೆ ಬಾಗಿಲು ಹಾಕಿಕೊಂಡಿದ್ದುದರಿಂದ ಈ ಹಾಸ್ಯಮಯ ವಿಕಟ ದೃಶ್ಯವನ್ನು ನೋಡಲಿಲ್ಲ.

ಸುಲ್ತಾನನಿಗೆ ಅಮಲಿನಿಂದ ಎಚ್ಚರವಾದಾಗ ರಾಜಕೋಟೆಯ ಪೋಲೀಸ್ ಠಾಣೆಯಲ್ಲಿ ಬಂದಿಯಾಗಿದ್ದನು. ಕನ್ಯಾಪಹಾರಕ್ಕೆ ಅವನ ಮೇಲೆ ಮೊಕದ್ದಮೆ ನಡೆಯಿತು. ಆದರೆ ಸಾಕಾದಷ್ಟು ಸಾಕ್ಷ್ಯವಿಲ್ಲದ್ದರಿಂದಲೂ, ಪಾಕಿಸ್ಥಾನ ಸರ್ಕಾರ ಅವನ ಬಂಧ ವಿಮೋಚನೆಯ ವಿಚಾರದಲ್ಲಿ ವಿಶೇಷ ಆಸಕ್ತಿ ವಹಿಸಿದ್ದರಿಂದಲೂ ಕೆಲವು ತಿಂಗಳುಗಳಲ್ಲಿಯೇ ಸುಲ್ತಾನನ ಬಿಡುಗಡೆಯಾಗಿ ಪಾಕೀಸ್ಥಾನಕ್ಕೆ ಹಿಂದಿರುಗಿದನು.

ನವಾಬ್‌ಜಾದಾ ಯಾಕೂಬ್ ಹಸನನ ಮೇಲೆ ಕನ್ಯಾಪಹಾರ, ಬ್ಲಾಕ್ ಮೈಲ್, ಅಕ್ರಮ ಬಂಧನೆ, ಕೊಲೆ ಪ್ರಯತ್ನ ಇತ್ಯಾದಿ ಅಪರಾಧಗಳಿಗೆ ಅವನ ಗೈರ್‌ಹಾಜರಿಯಲ್ಲಿ ಮೊಕದ್ದಮೆ ನಡೆದು ಶಿಕ್ಷೆ ವಿಧಿಸಲ್ಪಟ್ಟಿತು. ಆದರೆ ಅವನು ವನದುರ್ಗದಲ್ಲಿ ಕಾಮೇಶನಿಂದ ಪೆಟ್ಟು ತಿಂದ ಮರುದಿನವೇ ಪಾಕಿಸ್ಥಾನಕ್ಕೆ ಓಡಿ ಹೋದ್ದರಿಂದ ಶಿಕ್ಷೆ ಸಿಂಧುವಾಗಲಿಲ್ಲ. ಜುನಾಗಡದ ನವಾಬ್ ಮನೆತನಕ್ಕೂ ಅವನಿಗೂ ಯಾವ ಸಂಬಂಧವೂ ಇರಲಿಲ್ಲವೆಂದೂ, ನವಾಬರ ಸಂಬಂಧವನ್ನು ಕಲ್ಪಿಸಿಕೊಂಡು ಅವನು ಬೊಂಬಾಯ್, ಅಹಮದಾಬಾದ್ ಮತ್ತು ರಾಜ ಕೋಟೆಯಲ್ಲಿ ಅನೇಕ ಮೋಸ ಕೃತ್ಯಗಳನ್ನು ನಡೆಸಿದ್ದನೆಂದೂ ವಿಚಾರಣೆಯಲ್ಲಿ ರುಜುವಾತಾಯಿತು.

ಕೊನೆಯಲ್ಲಿ ವಿವರಿಸಿದ ಘಟನೆ ನಡೆದ ಕೆಲವು ದಿನಗಳಿಗೆ ಜುನಾಗಡ ಸಂಸ್ಥಾನ ಭಾರತದೊಡನೆ ವಿಲೀನವಾಯಿತು.

ರತ್ನಹಾರವನ್ನು ಕುರಿತ ಇನ್ನೊಂದು ವಿಷಯವನ್ನು ಮಾತ್ರ ನಾವು ವಾಚಕರಿಗೆ ತಿಳಿಸಬೇಕಾಗಿದೆ. ಇಷ್ಟೊಂದು ಅನರ್ಥಕ್ಕೆ ಕಾರಣವಾದ ರತ್ನಹಾರ ವನ್ನು ಧರಿಸುವುದು ಚಂದ್ರಲೇಖೆಗೆ ಇಷ್ಟವಾಗಲಿಲ್ಲ. ಮಗಳ ಸೂಚನೆಯಂತೆ ಕಿಷನ್‌ಚಂದನು ರತ್ನಹಾರದ ವಜ್ರಗಳನ್ನು ಕಳಚಿ ಪ್ರತ್ಯೇಕವಾಗಿ ಮಾರಿ ಬಂದ ಐದು ಲಕ್ಷ ರೂಪಾಯಿ ಹಣದಿಂದ ಅಪಹೃತ ಮಹಿಳೆಯರು ಮತ್ತು ಮಕ್ಕಳಿ ಗಾಗಿ ಅನಾಥಾಶ್ರಮವೊಂದನ್ನು ಕಟ್ಟಿಸಿದನು.

ನಿಜವಾದ ರತ್ನಹಾರದ ಮಾದರಿಯಲ್ಲಿ ಮಾಡಲ್ಪಟ್ಟಿದ್ದ ಎರಡು ಕೃತಕ ರತ್ನಹಾರಗಳಲ್ಲಿ ಒಂದು ಪಾಕಿಸ್ಥಾನದಲ್ಲಿ ಸುಲ್ತಾನನ ಹತ್ತಿರ ಉಳಿಯಿತು. ಎರಡನೆಯದು ಚಂದ್ರಲೇಖೆಯ ಬಿಡುಗಡೆಯಲ್ಲಿ ತೋರಿಸಿದ ಸಾಹಸಕ್ಕಾಗಿ ಪುರಸ್ಕಾರ ರೂಪದಲ್ಲಿ ಪ್ರಮೀಳೆಗೆ ಕೊಡಲ್ಪಟ್ಟಿತು. ಅದರಿಂದ ಕಾಮೇಶ ಮತ್ತು ರಮಾನಂದ್ ಇಬ್ಬರೂ ಸಂತುಷ್ಟರಾದರು.

